# ಬಾಲನಾಗಮ್ಮ ಜಾನಪದ ಮಹಾಕಾವ್ಯದಲ್ಲಿ ಸ್ತ್ರೀ ನಿರ್ವಚನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಎಂ.ಫಿಲ್. ನಿಬಂಧ)

ಸಂಶೋಧಕರು

ನೋಂದಣಿ ಸಂಖ್ಯೆ: ೧೮೦೧೦೧೦೩೦೦೦೧



ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - ೫೮೩ ೨೭೬

೨೦೧೯

# ಬಾಲನಾಗಮ್ಮ ಜಾನಪದ ಮಹಾಕಾವ್ಯದಲ್ಲಿ ಸ್ತ್ರೀ ನಿರ್ವಚನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಎಂ.ಫಿಲ್. ನಿಬಂಧ)

ಸಂಶೋಧಕರು

ನೋಂದಣಿ ಸಂಖ್ಯೆ: ೧೮೦೧೦೧೦೩೦೦೦೧




ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೧೯

## ಪರಿವಿಡಿ

ಅಧ್ಯಾಯ: ಒಂದು

**ಪೀಠಿಕೆ** ೧-೪

೧.೧. ಅಧ್ಯಯನದ ಉದ್ದೇಶ

೧.೨. ಅಧ್ಯಯನದ ಮಹತ್ವ

೧.೩. ಅಧ್ಯಯನದ ವ್ಯಾಪ್ತಿ

ಅಧ್ಯಾಯ: ಎರಡು

**ಮಹಿಳಾ ಪ್ರತೀನಿಧೀಕರಣ ಪರಿಕಲ್ಪನೆಯ ತಾತ್ವಿಕ ಚರ್ಚೆ ಅಥವಾ ಸ್ತ್ರೀವಾದಿ ತಾತ್ವಿಕ ಚರ್ಚೆ** ೫-೧೭

ಅಧ್ಯಾಯ: ಮೂರು

**ಬಾಲನಾಗಮ್ಮ ಭಿನ್ನ ಪಠ್ಯಗಳ ಸಾಂಸ್ಕೃತಿಕ ಸಂಕಥನ** ೧೮-೨೪

೩.೧. ಬಾಲನಾಗಮ್ಮ-ಸಂಪಾದಕ: ಡಾ.ಚಲುವರಾಜು

೩.೨. ಬಾಲನಾಗಮ್ಮ ಜಾನಪದ ಕಾವ್ಯ-ಸಂ.ಡಾ.ಮೈಸೂರು ಉಮೇಶ

೩.೩. ದಕ್ಷಿಣ ಕರ್ನಾಟಕದ ಜನಪದ ಕಾವ್ಯ ಪ್ರಕಾರಗಳು-ಡಾ.ಜೀ.ಶಂ. ಪರಮಶಿವಯ್ಯ

೩.೪. ಜಾನಪದ ಖಂಡಕಾವ್ಯಗಳು-ಜೀ.ಶಂ.ಪರಮಶಿವಯ್ಯ

ಅಧ್ಯಾಯ: ನಾಲ್ಕು

**ಬಾಲನಾಗಮ್ಮ ಕಥನ ಕಾವ್ಯ: ಮಹಿಳಾ ಪ್ರತಿನಿಧೀಕರಣ ನಿರ್ವಚನ** ೨೫-೬೫

೪.೧. ಬಾಲ ನಾಗಮ್ಮನ ಜನನದ ಸನ್ನಿವೇಶ

೪.೨. ನಾಗೇಂದ್ರ ನಾಗಮ್ಮನ ತಾಯಿಯನ್ನು ಪಡೆಯಲು ಬರುವ ಸಂದರ್ಭ

೪.೩. ನಾಗಮ್ಮನ ಮಲತಾಯಿ ನೀಡುವಂತ ಕಷ್ಟ

೪.೪. ನಾಗಮ್ಮನ ವೈವಾಹಿಕ ಬದುಕು

೪.೫. ಮಾಯದ ಫಕೀರ ಬಾಲನಾಗಮ್ಮನನ್ನು ಸೆರೆ ಹೊಯ್ಯುವ ಪ್ರಸಂಗ

೪.೬. ಬಾಲನಾಗಮ್ಮನ ಪಾವಿತ್ರತ್ತೆಯ ಪರೀಕ್ಷೆ ಗುರಿಯಾಗುವುದು

ಅಧ್ಯಾಯ: ಐದು

**ಉಪಸಂಹಾರ** **೬೬-೬೮**

**ಪರಮಾರ್ಶನ ಗ್ರಂಥಗಳು** **೬೯**

# ಅಧ್ಯಾಯ: ಒಂದು

## ಪೀಠಿಕೆ

ಭಾರತದಂತಹ ಬಹುತ್ವದ ನೆಲದಲ್ಲಿ ನೂರಾರು ಜಾತಿ, ಮತ, ಧರ್ಮ, ಪಂಗಡದ ಭಾಷೆಗೆ ಸೇರಿದ ವಿವಿಧ ಅಂತಹ ಸಮುದಾಯಗಳಿಗೆ ಸೇರಿದ ಜನರ ಜೀವನ ವಿಧಾನವನ್ನು ಆಯಾಯ ಸಮುದಾಯಗಳು ಒಳಗೊಂಡಿರುವ ಕಾವ್ಯಗಳು ನಮಗೆ ದೊರಕಿಸಿಕೊಡುತ್ತವೆ. ಮಾತಿನ ಸಂಕಥನವು ಅತೀವವಾಗಿ ಕಡೆಗಣಿಸಲಾದ ಕ್ಷೇತ್ರವಾಗಿದ್ದರೂ ಒಂದು ನಿರ್ದಿಷ್ಟ ಸಮುದಾಯದ ಸಾಮಾಜಿಕ ಅಸ್ತಿತ್ವ ತಿಳಿದುಕೊಳ್ಳುವುದಕ್ಕೆ ಮಹತ್ವದ ಒಳನೋಟಗಳನ್ನು ಒದಗಿಸುತ್ತದೆ. ಈ ಹಿನ್ನೆಲೆಯಲ್ಲಿ ಸಮುದಾಯಗಳಿಗೆ ಸೇರಿದ ಕಾವ್ಯಗಳಲ್ಲಿ ನಿರೂಪಣೆಗೊಂಡಿರುವಂತಹ ಹಾಡು, ಕತೆ, ಗಾದೆ, ಒಗಟು ಇತ್ಯಾದಿಗಳು ಸಮುದಾಯಕ್ಕೆ ಸೇರಿದ ಜನರ ಜೀವನದ ರೀತಿ ನೀತಿಗಳನ್ನು ತಿಳಿಸುತ್ತವೆ. ಒಂದು ಸಮುದಾಯದ ಅತ್ಯಂತ ಸಹಜ ಸ್ವರೂಪವನ್ನು ಮೈಗೂಡಿಸಿಕೊಂಡು ರಚನೆಯಾದ ಕಾವ್ಯಗಳು ಆ ಸಮುದಾಯಗಳ ನೋವು, ನಲಿವು, ಆಚರಣೆ, ವಿಧಿ-ವಿಧಾನ ಪದ್ಧತಿಯಂತಹ ಹಲವು ಸಂಗತಿಗಳನ್ನು ಒಳಗೊಂಡಿರುತ್ತವೆ. ವಿಧಿ-ನಿಷೇಧಗಳನ್ನೊಳಗೊಂಡಂತೆ ಒಂದೊಂದು ಸಮುದಾಯದ ಕಾವ್ಯ ಒಬ್ಬ ಬದುಕಿನ ರೂಪ-ಸ್ವರೂಪಗಳನ್ನು ಧಾರಣಾ ಮಾಡುತ್ತಾ ಸಾಗುತ್ತದೆ.

### ೧.೧. ಅಧ್ಯಯನದ ಉದ್ದೇಶ

ಸಮಾಜದಲ್ಲಿ ಮಹಿಳೆಗಿರುವ ಸ್ಥಾನಮಾನ, ಗಂಡುಲೋಕ, ಆಕೆಯನ್ನು ಕಂಡಿರುವ ರೀತಿ, ಬದುಕಿನ ವಿವಿಧ ಸಂದರ್ಭಗಳಲ್ಲಿ ಅವಳ ಸಂವೇದನೆ ಮುಂತಾದವುಗಳನ್ನು ಗಮನಿಸಲು ಜನಿಸಿದ ಮಹಾಕಾವ್ಯಗಳಲ್ಲಿ ಹೆಚ್ಚಿನ ಅವಕಾಶಗಳಿವೆ. ಈ ಕಾರಣಕ್ಕಾಗಿ ಬಾಲನಾಗಮ್ಮ ಜಾನಪದ ಮಹಾಕವ್ಯವನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡು ಈ ಕಾವ್ಯದಲ್ಲಿ ಬರುವ ಮಹಿಳಾ ಪ್ರತಿನಿಧೀಕರಣದ ವಿವಿಧ ನೆಲೆಗಳನ್ನು ಗುರುತಿಸಲಾಗುವುದು ಮತ್ತು ಹೆಣ್ಣು ದನಿಯನ್ನು ಗಂಡು ಪ್ರಮಾಣದಲ್ಲಿ ನೋಡಿದ ನಮ್ಮ ಅಧ್ಯಯನದ ಮಾದರಿಗಳ

ಅನೇಕ ನೇತ್ಯಾತ್ಮಕ ಸಂಗತಿಗಳನ್ನು ಗಮನಿಸುತ್ತಾ ಅವುಗಳ ಮರು ಓದಿನ ಜರೂರಿಗೆ ಒಳಗು ಮಾಡುವ ಉದ್ದೇಶವನ್ನು ಅಧ್ಯಯನ ಹೊಂದಿರುತ್ತದೆ.

ಜನಪದ ಮಹಾಕಾವ್ಯಗಳನ್ನು ಒಳಗೊಂಡ ಸಮುದಾಯಗಳಲ್ಲಿ ಲಿಖಿತ ಪಠ್ಯಗಳು ಸಿಗುವುದು ಅಪರೂಪ. ಇವರು ಮೌಖಿಕ ಸಂಪ್ರದಾಯದಲ್ಲೆ ತಮ್ಮೆಲ್ಲ ಸಂಸ್ಕೃತಿ, ಚರಿತ್ರೆ, ಸಾಮಾಜಿಕ ಆಗು-ಹೋಗುಗಳನ್ನು ಹಿಡಿದಿಟ್ಟಿರುತ್ತಾರೆ. ಅವುಗಳನ್ನು ಸಂದರ್ಭಕ್ಕೆ ತಕ್ಕಂತೆ ಉಪಯೋಗಿಸಿಕೊಳ್ಳುತ್ತಾರೆ. ಮಾತಿನ ಪರಂಪರೆಯ ಬರೆಹ ಸೌಲಭ್ಯವಿಲ್ಲದ ಸಮುದಾಯಗಳಿಗೆ ಪರಂಪರೆ ಮಾತುಗಳ ಮೂಲಕವೇ ತಲೆಮಾರಿನಿಂದ ತಲೆಮಾರಿಗೆ ಸಾಗಿ ಬರುತ್ತದೆ. ಹಾಗೆ ಸಾಗಿ ಬರುವಾಗ ಸೂಕ್ಷ್ಮ ರೂಪದಲ್ಲಿ ಬದಲಾವಣೆ ಹೊಂದುತ್ತಿರುತ್ತದೆಯಾದರೂ ತನ್ನ ಮೂಲಾಶಯಗಳನ್ನು ಬಿಟ್ಟು ಕೊಡುವುದಿಲ್ಲ. ಆದುದರಿಂದ ಜನಪದ ಕಾವ್ಯಗಳ ಮೂಲಕ ಸಮುದಾಯಗಳ ಜೀವನವನ್ನು ಗಮನಿಸುವುದು ಅರ್ಥಪೂರ್ಣ. ಸಮುದಾಯಗಳ ಮೂಲಕ ಈ ಸಮುದಾಯಗಳ ಸಾಮಾಜಿಕ ಅಸ್ತಿತ್ವ ಅರಿತುಕೊಳ್ಳಲು ಮಹತ್ವದ ಒಳನೋಟಗಳು ಸಿಗುತ್ತವೆ. ಅಂತೆಯೇ ಮಹಿಳೆಯನ್ನು ಕುರಿತಂತೆ ಅಧ್ಯಯನ ನಡೆಸಲು ಹಲವು ಮಾದರಿ ಗಳಿವೆ ಎಂದು ತಿಳಿಸುವುದು ಈ ಅಧ್ಯಯನದ ಉದ್ದೇಶವಾಗಿದೆ.

## ೧.೨. ಅಧ್ಯಯನದ ಮಹತ್ವ

ಸಮಾಜದ ಪರಿಕಲ್ಪನೆಯು ಹೆಣ್ಣು ಹಾಗೂ ಗಂಡನ್ನು ಒಳಗೊಂಡಿದೆ. ಆದರೆ ಸಮಾಜದಲ್ಲಿ ಗಂಡು ಪ್ರಧಾನವಾಗಿ ಹೆಣ್ಣು ಅಗೋಚರವಾಗಿದ್ದಾಳೆ, ನಿರ್ಲಕ್ಷಿಸಲ್ಪಟ್ಟಿದ್ದಾಳೆ. ಗಂಡು ಪ್ರಧಾನ ಸಮಾಜ ಮಹಿಳೆಯನ್ನು ಗುರುತಿಸುವುದಕ್ಕಾಗಿಯೇ ಕೆಲವು ವಿಶೇಷ ಲಕ್ಷಣಗಳನ್ನು ಅವಳಿಗೆ ಆರೋಪಿಸಿದೆ. ಮಾನವನ ವಿಶ್ಲೇಷಣೆಯ ಬಹುತೇಕ ಸಂದರ್ಭಗಳಲ್ಲಿ ಗಂಡಿನ ಅಥವಾ ಗಂಡಿಗೆ ನಿರ್ದಿಷ್ಟವಾದ ಅನುಭವ ವಲಯವನ್ನೇ ಒಳಗೊಂಡಿರುತ್ತದೆ. ವಾಸ್ತವವಾಗಿ ಗಂಡಿನ ಅನುಭವ ಹೆಣ್ಣಿನ ಅನುಭವವೂ ಹೌದು. ಆದರೆ ಪುರುಷ ಕೇಂದ್ರಿತ ಆಲೋಚನೆಯ ತಾಯ್ತನ, ವಾತ್ಸಲ್ಯ ಪೊರೆಯುವ ಗುಣ ಮುಂತಾದವು ಹೆಣ್ಣಿನದೆಂದು ಕೊಂಡಾಡುತ್ತದೆ. ಅವುಗಳನ್ನು ಹೆಣ್ಣಿಗೆ ಇರುವ ಶಕ್ತಿ ವಿಶೇಷಗಳೆಂದು ಹೇಳದೆ ಇವು ಹೆಣ್ಣಿನ ಲಕ್ಷಣಗಳೆಂದು ಕರೆದು ವೈಭವಿಕರಿಸಿ ನಿರ್ಬಂಧದ ಗೆರೆ ಎಳೆಯುತ್ತದೆ. ಆಮೂಲಕ ಹೆಣ್ಣಿಗಿರುವ ವಿಶಿಷ್ಟವಾದ ಅನುಭವಲೋಕವನ್ನು ಕ್ಷುದ್ರವಾದುದು ಎಂದು ಪರಿಗಣಿಸಿ ಅದರ ಘನತೆ ಅನನ್ಯತೆ ಮತ್ತು ಮಹತ್ವವನ್ನು ನಿರಾಕರಿಸುತ್ತ ಸಾಗುತ್ತದೆ. ಆದರೆ ಹೆಣ್ಣು ಒಂದರ್ಥದಲ್ಲಿ ಜನಪದ ಇದ್ದ ಹಾಗೆ ನಾಶದ ಪ್ರಶ್ನೆಯೇ ಇಲ್ಲ. ಎಲ್ಲ ಬಗೆಯ ಅಪಮಾನ ಶೋಷಣೆಗಳ ನಡುವೆಯೂ ಕೂಡ ತನ್ನ ನೈಸರ್ಗಿಕ ವಿವೇಕ ಸಹಜವಾದ ಚೈತನ್ಯದಿಂದ ಅಸ್ತಿತ್ವವನ್ನು

ಉಳಿಸಿಕೊಂಡು ಬಂದಿದ್ದಾರೆ. ಸವಾಲುಗಳನ್ನು ಸ್ವೀಕರಿಸುತ್ತಾ ಏಳುಬೀಳುಗಳನ್ನು ಕಾಣುವುದ ರೊಂದಿಗೆ ತನ್ನ ಕ್ರಿಯಾಶೀಲತೆಯನ್ನು ಮೆರೆದಿದ್ದಾರೆ. ಇದು ಅನಾದಿಕತೆಯಾದರೂ ಆಕೆಯ ಒಳದನಿಯಲ್ಲಿ ಗಂಡುಲೋಕದ ಮೂಲಭೂತವಾದದ ವಿರುದ್ಧದ ಸೊಲ್ಲುಗಳಿವೆ. ಅಂತಹ ಸೊಲ್ಲುಗಳನ್ನು ಅದುಮಿಟ್ಟು ಪ್ರತಿಭಟನೆಯ ಮಾತಾಗಿರುವ ನೆಲೆಯನ್ನು ವಿವರಿಸುವುದೇ ಈ ಅಧ್ಯಯನದ ಮಹತ್ವದ ಒಂದು ಅಂಶವಾಗಿದೆ.

## ೧.೩. ಅಧ್ಯಯನದ ವ್ಯಾಪ್ತಿ

ಜಾನಪದದ ಜೀವನಾನುಭವದ ಒಟ್ಟು ಮೊತ್ತವೆ ಜಾನಪದವಾಗಿರುವುದರಿಂದ ಇಲ್ಲಿ ಬದುಕಿನ ವಿಭಿನ್ನ ನೆಲೆಗಳು ಕಂಡುಬರುತ್ತವೆ. ಹೀಗಾಗಿ ಸಂಶೋಧನೆಗೆ ವಿಫುಲ ಅವಕಾಶ ಗಳಿರುವುದರಿಂದ ಸಾಹಿತ್ಯ ಶಿಸ್ತಿನ ಮೂಲಕ ಜಾನಪದವನ್ನು ನನ್ನ ಕ್ಷೇತ್ರವನ್ನಾಗಿ ಆಯ್ಕೆ ಮಾಡಿಕೊಂಡಿದ್ದೇನೆ ಹಾಗೂ ಬಾಲನಾಗಮ್ಮ ಜಾನಪದ ಮಹಾಕಾವ್ಯಕ್ಕೆ ಸಂಬಂಧಿಸಿದಂತೆ ಬಂದ

೧. ಬಾಲನಾಗಮ್ಮ ಜಾನಪದ ಕಾವ್ಯ–ಡಾ.ಮೈಸೂರು ಉಮೇಶ
೨. ಬಾಲನಾಗಮ್ಮ–ಸಂಪಾದಕರು ಡಾ.ಚಲುವರಾಜು
೩. ಜನಪದ ಖಂಡಕಾವ್ಯಗಳು–ಜೀ.ಶಂ.ಪರಮಶಿವಯ್ಯ

ಇನ್ನಿತರ ಕೆಲವು ಕೃತಿಗಳನ್ನು ಕಾವ್ಯದ ವಿಶ್ಲೇಷಣೆಗೆ ಪೂರಕವಾಗಿ ಅಧ್ಯಯನದಲ್ಲಿ ಉಳಿಸಿಕೊಳ್ಳಲಾಗಿದೆ. ಬರಹ ಹಾಗೂ ಮಾತಿನ ನಡುವಿನ ವಿಭಜನೆ ಒಂದು ಕಲ್ಪನೆಯಷ್ಟೇ. ಬರೆಹ ಸಂಪ್ರದಾಯ ಆರಂಭಗೊಳ್ಳುವುದೇ ಮಾತಿನ ವಿಷಯಗಳನ್ನೇ ಬರೆಹಕ್ಕೆ ಇಳಿಸುವ ಮೂಲಕ. ಆದ್ದರಿಂದ ಎಲ್ಲಾ ಸಂಸ್ಕೃತಿಗಳ ಮಹಾಕಾವ್ಯಗಳ ಈ ಸಂಗತಿಗೆ ಮಾದರಿ ಉದಾಹರಣೆಯಾದಂತೆ ಈ ಕಾವ್ಯವೂ ಉದಾಹರಣೆಯಾಗಿದೆ. ಸಮಕಾಲೀನ ನೆಲೆಯಲ್ಲಿ ಜನಪದ ಮಹಾಕಾವ್ಯವಾದ ಬಾಲನಾಗಮ್ಮ ಕೃತಿಯನ್ನು ಮಹಿಳಾ ಪ್ರತಿನಿಧೀಕರಣದ ನೆಲೆಯಲ್ಲಿ ಗುರುತಿಸುವುದು ಒಂದು ಮುಖ್ಯ ಕಾರಣವಾಗಿದೆ. ಜನಪದ ಮಹಾಕಾವ್ಯ ಹೆಣ್ಣು ದನಿಯನ್ನು ಗಂಡು ಪ್ರಮಾಣದಲ್ಲಿ ನೋಡಿದ ಪಠ್ಯಗಳವರೆಗೆ ವ್ಯಾಪ್ತಿಯನ್ನು ವಿಸ್ತರಿಸಿಕೊಳ್ಳಲಾಗಿದೆ. ಯಾವುದೇ ಮೂಲದಿಂದ ವಸ್ತುವನ್ನು ಆಯ್ದುಕೊಂಡು ಶೋಧನೆಯೇ ಮುಖ್ಯ ಗುರಿಯಾಗುತ್ತದೆ.

ಅಧ್ಯಾಯ: ಎರಡು

# ಮಹಿಳಾ ಪ್ರತೀನಿಧೀಕರಣ ಪರಿಕಲ್ಪನೆಯ ತಾತ್ವಿಕ ಚರ್ಚೆ ಅಥವಾ ಸ್ತ್ರೀವಾದಿ ತಾತ್ವಿಕ ಚರ್ಚೆ

ಸ್ತ್ರೀ ಪ್ರತಿನಿಧಿಕರಣ ಎಂದರೇ ಸ್ತ್ರೀಯನ್ನು ಪ್ರತಿನಿಧಿಸುವುದು ಎಂದರ್ಥ. ೬೦ರ ದಶಕದಲ್ಲಿ ಸ್ತ್ರೀವಾದ ಹುಟ್ಟಿಕೊಂಡಾಗಿನಿಂದ ಸ್ತ್ರೀ ಕೇಂದ್ರಿತವಾದ ಚರ್ಚೆಗಳು ನಡೆದವು. ಮಹಿಳೆಯನ್ನು ಪ್ರತಿನಿಧಿಸುವುದು ಎಂದಾಗ ನಮ್ಮಲ್ಲಿ ಅನೇಕ ಪ್ರಶ್ನೆಗಳು ಮೂಡುತ್ತವೆ. ೬೦ರ ಪೂರ್ವಕ್ಕೆ ಮಹಿಳೆಯನ್ನು ಪ್ರತಿನಿಧಿಸುವ ರಾಜಕಾರಣ, ಸಮಾಜ, ಆಡಳಿತ, ಧಾರ್ಮಿಕತೆ, ಪುರಾಣ, ಸಾಹಿತ್ಯ ಮುಂತಾದ ಸಾಂಸ್ಕೃತಿಕ ರಂಗಗಳಲ್ಲಿ ಹೆಣ್ಣನ್ನು ಪ್ರತಿನಿಧಿಸುತ್ತಿರಲಿಲ್ಲವೇ ಎನ್ನುವ ಪ್ರಶ್ನೆಗಳು ನಮ್ಮನ್ನು ಕಾಡುತ್ತಿರುತ್ತವೆ. ಪ್ರಾಚೀನ ಕನ್ನಡ ಸಾಹಿತ್ಯವನ್ನು ಗಮನಿಸುವುದಾದರೆ ೧೨ನೇ ಶತಮಾನದ ಅಕ್ಕಮಹಾದೇವಿ ಬರುವವರೆಗೂ ಮಹಿಳಾ ಬರಹಗಾರರು ಇರಲಿಲ್ಲ. ಚರಿತ್ರೆಯಲ್ಲಿ ವಿರಳ ಸಂಖ್ಯೆಯಲ್ಲಿ ರಾಣಿಯರಿದ್ದಾರೆ. ಇದಕ್ಕೆಲ್ಲಾ ಪುರುಷ ಪ್ರಧಾನವಾದಂತಹ ಸಮಾಜ. ಸಿಂಧೂ ನಾಗರಿಕತೆಯಲ್ಲಿ ಮಾತೃಪ್ರದಾನವಾದ ಕುಟುಂಬಗಳು ಅಥವಾ ಸಮಾಜವಿದ್ದು ತದನಂತರ ಪುರುಷ ಪ್ರಧಾನ ಕುಟುಂಬಗಳಾಗಿ ರೂಪಗೊಂಡವು. ಸಮಾಜದ ಮುನ್ನೆಲೆಯಲ್ಲಿದ್ದ ಹೆಣ್ಣು ಎರಡನೇ ಪ್ರಜೆಯಾಗಿಸುವ ಕುತಂತ್ರ ಸಮಾಜದಲ್ಲಿ ಬೇರೂರಿಸಲು ಶುರುಮಾಡಿದರು. ಗಂಡಿನ ಸಮಾನವಾಗಿ ನಿಲ್ಲುವ ಹೆಣ್ಣಿನ ಅವಕಾಶವನ್ನು ತಪ್ಪಿಸಲೆಂದೇ ಸಾಮಾಜಿಕವಾಗಿ, ಧಾರ್ಮಿಕವಾಗಿ, ಆಡಳಿತಾತ್ಮಕವಾದಂತಹ ವಿಷಯಗಳಲ್ಲಿ ಅನೇಕ ಕಟ್ಟುಪಾಡುಗಳನ್ನು ಹೇರಲಾಯಿತು. ಕೌಟುಂಬಿಕ ಕೆಲಸಕಾರ್ಯಗಳಿಗೆ ಸೀಮಿತಗೊಳಿಸಲಾಯಿತು. ಅದರಲ್ಲೂ ಸೇವಕಿಯ ಕೆಲಸಗಳಿಗೆ ಸೀಮಿತಗೊಳಿಸಿದರು. ಯಾವುದನ್ನು ಸಮಾಜದಲ್ಲಿ ಅತ್ಯುನ್ನತ ಜಾತಿ ಅಂಥ ಬ್ರಾಹ್ಮಣರನ್ನು ಕರೆಯುತ್ತೇವೆಯೋ ಅಲ್ಲಿಯೇ ಮಹಿಳೆಯನ್ನು ಶಿಕ್ಷಣದಿಂದ ವಂಚಿಸಲಾಯಿತು. ಇನ್ನೂ ಹಿಂದುಳಿದ, ದಲಿತ, ಶೂದ್ರ ಜನಾಂಗದವರ ಹೆಣ್ಣು ಮಕ್ಕಳು ಕೂಲಿಕಾರರಾಗಿ ಶತಮಾನಗಳ ಕಾಲ ಮುಂದು ವರೆದರು.

ಇನ್ನೂ ಸಾಹಿತ್ಯ ರಚನೆಯನ್ನು ಗಮನಿಸಿದರೆ ಪುರಾಣ ಕೃತಿಗಳಿಂದ ನವೋದಯ ಸಾಹಿತ್ಯದವರೆಗೂ ಮಹಿಳಾ ಪ್ರಧಾನವಾದ ಕೃತಿಗಳು ರಚನೆಗೊಂಡಿದ್ದೆ ಇಲ್ಲ(ವಚನ ಚಳುವಳಿ ಹೊರತುಪಡಿಸಿ) ಸ್ತ್ರೀ ಅಸ್ಮತೆಯನ್ನು ಗುರುತಿಸುವ ಆಕೆಯ ಇರುವಿಕೆಯನ್ನು ಗುರುತಿಸುವ ಕೃತಿಗಳು ನಮ್ಮ ಹಿಂದಿನ ಲೇಖಕರಲ್ಲಿ ರಚನೆಗೊಂಡಿರುವುದು ವಿರಳ. ಹೆಣ್ಣು ಶೋಷಣೆಯ ಸಂಕೇತವಾಗಿ, ಸೇವಕಿಯಾಗಿ, ಜನನ ಯೋಧರ ಚರಿತೆಯಲ್ಲಿ ಅದರ ಮಾಡುವ ಪಾತ್ರವಾಗಿ, ದ್ರೌಪದಿ ಪಂಚವಲ್ಲಬೆ, ಸಂಚಿಹೊನ್ನಮ್ಮಳ ಕೃತಿಯಲ್ಲಿ ಗಂಡಿಗೆ ಸೇವಕಿಯಾಗಿ ಒಟ್ಟಿನಲ್ಲಿ ಕೃತಿಯಲ್ಲಿ ಪ್ರಧಾನ ಪಾತ್ರವಾಗಿ ರಚನೆಯಾಗದೇ ಪುರುಷ ವೈಭವಿಕರಣಕ್ಕೆ ಪೂರಕವಾಇ ಬರುವ ಪಾತ್ರಗಳಾಗಿ ಹೆಣ್ಣನ್ನು ಸೃಷ್ಟಿ ಮಾಡಲಾಗಿದೆ. ಇದಕ್ಕೆ ಕಾರಣ ಪುರುಷ ಸಮಾಜವು ಮಹಿಳೆಯ ಇರುವಿಕೆಯನ್ನು ಮೂಲೆಗುಂಪಾಗಿಸುವ, ಭವಿಷ್ಯದ ಆಗುವಿಕೆಯನ್ನು ಚಿವುಟಿ ಹಾಕುವ ಮನಸ್ಥಿತಿಗಳು ಬಹುಕಾಲ ಆಳಿದ್ದರಿಂದ ಮಹಿಳೆಯರಿಗೆ ಶಿಕ್ಷಣದಿಂದ ವಂಚಿಸಿದ್ದರಿಂದ ಸ್ತ್ರೀ ಅಸ್ಮತೆಯ ಪ್ರಶ್ನೆ ಎನ್ನುವುದು ಶೇ.ಇಇರಷ್ಟು ಅನುಪಾತ ಸೌಲಭ್ಯ ಪಡೆಯುವಲ್ಲಿಯೇ ಹೆಣಗಾಡಬೇಕಾದ ಪರಿಸ್ಥಿತಿ ಇದೆ.

ಸ್ತ್ರೀ ಪ್ರತಿನಿಧೀಕರಣ ಎಂಬುದಕ್ಕೆ ಸರಿಯಾದ ವ್ಯಾಖ್ಯಾನಗಳಿಲ್ಲ. ಮಹಿಳೆಯ ಬದುಕಿನ್ನು ಸಮಾಜದ ಸಾಂಸ್ಕೃತಿಕ ವಿಭಿನ್ನ ರಂಗಗಳಲ್ಲಿ ಮಹಿಳೆಯರ ಚಟುವಟಿಕೆಗಳ ಮೂಲಕ ಪ್ರತಿನಿಧೀಸುವಂತಹದ್ದಾಗಿರುತ್ತದೆ. ಸಾಂಸ್ಕೃತಿಕ ವಲಯವು ಹೆಣ್ಣಿಗೆ ಕೊಟ್ಟ ಮಾನ್ಯತೆಯನ್ನು ಪ್ರತಿನಿಧೀಕರಣ ಎನ್ನಬಹುದಾಗಿದೆ. ಮಹಿಳಾ ಪ್ರತಿನಿಧೀಕರಣವು ಪುರುಷ ಪ್ರತಿನಿಧೀಕರಣಕ್ಕಿಂತಲೂ ಅನನ್ಯವಾಗಿ ನಿಲ್ಲುತ್ತದೆ. ಮಹಿಳೆಯ ಬದುಕಿನಲ್ಲಾದ ಅನುಭವಗಳ ವಿಭಿನ್ನತೆ, ವಿಶಿಷ್ಟತೆ, ಅನನ್ಯತೆಗಳನ್ನು ಗುರುತಿಸುವ ಮೂಲಕ ಮಹಿಳೆ ಹೋರಾಟ, ಚಿಂತನೆ, ಸೈದ್ಧಾಂತಿಕ, ಆದರ್ಶ, ಸಹನೆ ಒಟ್ಟಾರೆ ಸ್ತ್ರೀ ಬದುಕಿನ ಪ್ರತಿನಿಧೀಕರಣವು ಯಾವ ಸ್ವರೂಪದಲ್ಲಿದೆ ಎಂಬುದನ್ನು ತಿಳಿಯಬಹುದಾಗಿದೆ. ಆಕೆ ಶಿಕ್ಷಣ, ಉದ್ಯೋಗ, ಸಾಮಾಜಿಕತೆ, ಆಡಳಿತ, ರಾಜಕೀಯ, ಕಲೆ, ಕ್ರೀಡೆಗಳಂತಹ ವಲಯಗಳಲ್ಲಿ ಯಶಸ್ಸನ್ನು ಪಡೆದವರನ್ನು ಮಾದರಿಯಂತೆ ಶ್ರೇಯಸ್ಸನ್ನೇ ಆಧಾರವಾಗಿಸಿಕೊಂಡು ಗುರುತಿಸುವಂತಹದ್ದಲ್ಲ. ಏಕೆಂದರೆ ಸಮಾಜದ್ಲಲಿ ನಾನಾ ತರಹದ ಮಹಿಳೆಯರಿದ್ದಾರೆ. ಅಕ್ಷರಸ್ಥ ಮಹಿಳೆ ಅನಕ್ಷರಸ್ಥ ಮಹಿಳೆ, ಉದ್ಯೋಗಸ್ಥ ಮಹಿಳೆ, ಕೂಲಿ ಕಾರ್ಮಿಕ, ಕಲಾವಿದೆ, ಮನೆಗೆಲಸ, ವೃದ್ಧರು, ಭಿಕ್ಷುಕರು, ಲೈಂಗಿಕ ಅಲ್ಪಸಂಖ್ಯಾತರು ಮುಂತಾದ ವೃತ್ತಿಗಳಲ್ಲಿ ಕೆಲಸ ಮಾಡುವವರು ಇದ್ದಾರೆ. ಇದರರ್ಥ ಬದುಕನ್ನು ಗೆದ್ದ ಶ್ರೀಮಂತಿಕೆಯ ಉದ್ಯೋಗದ ಕಾರಣಕ್ಕೆ ಅವರ ಬದುಕನ್ನು ಸ್ತ್ರೀಪ್ರತಿನಿಧೀಕರಣ ಎನ್ನುವು ದಾದರೆ ಸಾಮಾನ್ಯ ಕೂಲಿ ಕಾರ್ಮಿಕಳು ಸಹ ಹೆಣ್ಣೇ ಅಲ್ಲವೇ, ಆಕೆಗೂ ಒಂದು ಬದುಕಿದೆ

ಅಲ್ಲವೇ ಆಕೆಯ ಕಷ್ಟ, ನೋವು-ನಲಿವು, ತ್ಯಾಗ, ಯಶಸ್ಸು ಎಲ್ಲವೂ ಅನುಭವದ ಸಂಕೇತವಾಗಿ ಆಕೆಯನ್ನು ಪ್ರತಿನಿಧಿಸುತ್ತಲೇ ಇರುತ್ತವೆ. ಹೀಗಾಗಿ ಮಹಿಳೆಯನ್ನು ಅಕ್ಷರಸ್ಥೆ, ಅನಕ್ಷರಸ್ಥೆ ಎಂದು ವಿಭಾಗಿಸಿ ನೊಡದೆ, ಮಹಿಳೆ ಇದ್ದ ಸ್ಥಿತಿಯನ್ನೇ ಮಾನ್ಯ ಮಾಡು ವುದಾಗಿದೆ. ಈಕಾರಣಕ್ಕಾಗಿಯೇನೋ ಸಾಹಿತ್ಯದ ಭಾಗವಾಗಿ ಇಂದಿಗೂ ಪ್ರತಿನಿಧಿಸುವ ಅಥವಾ ಸಾಹಿತ್ಯದ ಪ್ರಕಾರಗಳಲ್ಲಿ ಸ್ಥಾನ ಪಡೆದಿರುವುದು ಸಾಮಾನ್ಯಳೇ ಹೊರತು, ಸಮಾಜದ ಉತ್ತುಂಗದಲ್ಲಿರುವ ಮಹಿಳೆಯಲ್ಲ.

ಸಮಾಜ ಅಧ್ಯಯನಗಳು ಯಶಸ್ವಿ ಮಹಿಳೆಯನ್ನು ಪ್ರತಿನಿಧಿಸಿದರೆ, ಸಾಹಿತ್ಯವು ಸಾಮಾನ್ಯ ಮಹಿಳೆಯನ್ನು ಒಳಗೊಂಡಿರುತ್ತದೆ. ಸಾಹಿತ್ಯದಲ್ಲಿ ಒಂದು ವೇಳೆ ಯಶಸ್ವಿ ಉದ್ಯೋಗಸ್ಥ ಶ್ರೀಮಂತ ಮಹಿಳೆಯಿದ್ದರೆ ಆಕೆ ತನ್ನ ಸುತ್ತಲಿನವರಿಂದ ಅನುಭವಿಸುತ್ತಿರುವ ಮಾನಸಿಕ ತೊಳಲಾಟಗಳ ಕುರಿತು ಪ್ರತಿನಿಧಿಸುತ್ತದೆ. ಹೀಗಾಗಿ ಸಾಹಿತ್ಯ ಸಾಮಾನ್ಯರ ಪ್ರತಿನಿಧಿಯಾಗಿರುತ್ತದೆ.

ಮಹಿಳೆಯ ಬದುಕು ಮತ್ತು ಅನುಭವಗಳು ಭಿನ್ನವಾಗಿರುತ್ತವೆ. ಮಹಿಳೆಯರ ಅನುಭವ, ಅಭಿರುಚಿ, ಸ್ಥಾನಮಾನ, ಪುರುಷರಂತ ವಿಭಿನ್ನವಾಗಿರುವ ಅನೇಕ ಸಂದರ್ಭಗಳಲ್ಲಿ ಮಹಿಳೆಯರನ್ನು ಕ್ರಿಯಾಶೀಲಗೊಳಿಸುವಲ್ಲಿ ಸಹಕಾರಿಯಾಗುತ್ತವೆ. ಸೂಕ್ಷ್ಮಜ್ಞರಾದ ಮಹಿಳೆಯ ಪ್ರಪಂಚವನ್ನು ಅನಾವರಣಗೊಳಿಸುವ ಅಧ್ಯಯನಗಳು ಆಗಬೇಕಿದೆ. ಕುಟುಂಬದಲ್ಲಿ ಸಮಾಜ ದಲ್ಲಿ ಹೆಣ್ಣಿನ ಬದುಕಿಗೆ ಗಂಡಿಗಿಂತ ವೈವಿಧ್ಯಮಯವಾದ ಆಯಾಮಗಳಿರುತ್ತವೆ ಎಂಬುದು ಒಂದು ಕಾರಣವಾದರೆ, ಸಮಾಜದಲ್ಲಿಯೇ ಇನ್ನು ೨ನೇ ದರ್ಜೆಯ ಪ್ರಜೆಯಾಗಿ ಪರಿಗಣಿಸ ಲಾಗುತ್ತಿದೆ ಎಂಬುದು ಇನ್ನೊಂದು ಕಾರಣವಾಗಿದೆ. ಈ ವಿವಿಧ ಆಯಾಮಗಳನ್ನು ಮತ್ತು ತರತಮ ಭಾವವನ್ನು ಗುರುತಿಸಿ ವಿಶ್ಲೇಷಿಸುವ ಸಲುವಾಗಿ ನಿರ್ದಿಷ್ಟ ಸಾಹಿತ್ಯದಲ್ಲಿ 'ಸ್ತ್ರೀ ಪಾತ್ರಚಿತ್ರಣ', 'ಹೆಣ್ಣಿನ ಪರಿಕಲ್ಪನೆ', 'ಸ್ತ್ರೀಪ್ರತಿನಿಧೀಕರಣ' ಮುಂತಾದ ಹೆಸರುಗಳಿಂದಲೂ ಕರೆಯಬಹುದಾಗಿದೆ.

"ಸ್ತ್ರೀಪ್ರತಿನಿಧೀಕರಣ ಎಂದರೆ ಒಂದು ವ್ಯವಸ್ಥೆ ಹೆಣ್ಣನ್ನು ನಿಯಂತ್ರಿಸುತ್ತಾ ಬಂದರೂ ಆದರಿಂದ ಅವಳು ಅನುಭವಿಸಿದ ಬದುಕನ್ನು ಪ್ರತಿನಿಧಿಸುವುದಾಗಿದೆ. ಹೆಣ್ಣು ಬದುಕಿದ ರೀತಿಯನ್ನು ಅವಳ ಕಾಲದ ಸಂಸ್ಕೃತಿ, ನಂಬಿಕೆಗಳ ಹಿನ್ನೆಲೆಯಲ್ಲಿ ನೋಡುವುದಾಗಿದೆ. ಅವಳ ಆಲೋಚನೆ ಬದುಕಿನ ರೀತಿಯಲ್ಲೇ ಅವಳಿಗಿದ್ದ ಸಮಾಜ, ಸಂಸ್ಕೃತಿ ಹಾಗೂ ಆಳುವವರ್ಗ ಅವಳನ್ನು ನಡೆಸಿಕೊಂಡ ಬಗೆಯನ್ನು ಹುಡುಕುವುದಾಗಿದೆ. ಮಾಸ್ತಿ ಅವರ

ಕತೆಗಳಲ್ಲಿ ಸ್ತ್ರೀ ಪ್ರತಿನಿಧೀಕರಣ ಎಂಬ ಅಧ್ಯಾಯದಲ್ಲಿ ವಿವರಿಸಿದ್ದಾರೆ" ಹೀಗೆ ಮಹಿಳೆಯ ಪ್ರತಿನಿಧೀಕರಣವು ಕಾಲದಿಂದ ಕಾಲಕ್ಕೆ ಬದಲಾಗುತ್ತ ಹೋಗುತ್ತದೆ.

ಪ್ರಾಚೀನ ಕಾಲದ ಮಹಿಳಾ ಪ್ರತಿನಿಧೀಕರಣ ಆಧುನಿಕ ಕಾಲದ ಮಹಿಳಾ ಪ್ರತಿನಿಧೀಕರಣಕ್ಕೂ ವ್ಯತ್ಯಾಸವಿರುವುದನ್ನು ಕಾಣಬಹುದು. ಹೀಗೆ ಪ್ರತಿನಿಧಿಸುವ ಮಹಿಳೆಯರನ್ನು ಏಕಪ್ರಕಾರವಾದ ಮಾದರಿಯಲ್ಲಿ ನೋಡಿದರೆ ಅಲ್ಲಿ ಕೇವಲ ಏಕಪ್ರಕಾರವಾದ ಫಲಿತಾಂಶ ದೊರೆಯಲಿಕ್ಕಿಲ್ಲ. ಹೇಗೆಂದರೆ ಪ್ರತಿನಿಧೀಕರಣ ಎಂಬ ಶಬ್ದವನ್ನು ಗಮನಿಸಿದಾಗ ಅದು ಭಿನ್ನತೆಯ ಸ್ವರೂಪದಲ್ಲಿ ಕಂಡುಬರುತ್ತದೆ. ಹತ್ತು ಮಹಿಳೆಯರಲ್ಲಿ ಒಬ್ಬ ಮಹಿಳೆಯನ್ನು ಪ್ರತಿನಿಧಿಯಾಗಿ ತೆಗೆದುಕೊಂಡಾಗ ಅಲ್ಲಿ ಪ್ರತಿನಿಧಿಸುವ ಮಹಿಳೆಯ ಬದುಕು, ಬವಣೆ, ಅನುಭವಗಳ ಕುರಿತು ಮಾತ್ರ ಫಲಿತಾಂಶ ಸಿಗಬಹುದೇ ಹೊರತು ಉಳಿದ ಒಂಬತ್ತು ಜನರ ಬದುಕು, ಬವಣೆ, ಅನುಭವಗಳು ಕೈಬಿಟ್ಟಾಂತಾಗುತ್ತವೆ. ಹಾಗಾಗಿ ಒಬ್ಬ ಮಹಿಳೆಯಿರುವಂತೆ ಇನ್ನೊಬ್ಬಳಿರುವುದರಲ್ಲಿ "ರೂಪ, ಗುಣ, ಗಾತ್ರ, ಎತ್ತರವಲ್ಲದೇ, ಆರ್ಥಿಕ, ಸಾಮಾಜಿಕ, ಕೌಟುಂಬಿಕ ಪರಿಸ್ಥಿತಿಗಳು, ಶಿಕ್ಷಣ ಸಂಸ್ಕೃತಿ, ಧರ್ಮ, ವೇಷಭೂಷಣಗಳು, ವಿವಾಹಿತೆ-ಅವಿವಾಹಿತೆ ಉದ್ಯೋಗ, ಅನುಭವ ಇತ್ಯಾದಿ ಅಂಶಗಳಿಂದಲೂ ಒಬ್ಬಳು ಮತ್ತೊಬ್ಬಳಿಗಿಂತ ಭಿನ್ನವಾಗಿರುತ್ತಾಳೆ. ಆದರೆ ಅವರೆಲ್ಲರ ಈ ಭಿನ್ನತೆಯಲ್ಲೂ ಒಂದು ಸಾಮ್ಯತೆಯ ಸಾಧ್ಯವಿದೆ. ಪ್ರತಿಯೊಬ್ಬ ಸ್ತ್ರೀಯೂ ಪುರುಷ ಪ್ರಧಾನ ಸಂಸ್ಕೃತಿಯಲ್ಲಿ ಜೀವಿಸುತ್ತಿದ್ದಾಳೆ ಹಾಗೂ ಪುರುಷರು ಸ್ತ್ರೀಯರನ್ನು ನೋಡುವ ದೃಷ್ಟಿಕೋನ ಇವೆಲ್ಲ ಒಂದೇ ಆಗಿವೆ. ವ್ಯವಸ್ಥೆಯಲ್ಲಿ ಅಸ್ತಿತ್ವವಿರುವ ಜ್ಞಾನ ಮೀಮಾಂಸೆಗಳೆಲ್ಲವೂ ಪುರುಷ ರಚಿತವಾಗಿರುವುದರಿಂದ ಅವನು ರೂಪಿಸಿದ ಮಹಿಳೆಯ ಪ್ರತಿನಿಧೀಕರಣದ ಚಿತ್ರಣವೇ ದೊರೆಯುತ್ತದೆ. ಉದಾಹರಣೆ ಗೃಹಿಣಿಯೊಬ್ಬಳನ್ನು ನೋಡಬೇಕಾದರೆ ಅಲ್ಲಿ ಇಡೀ ಮಹಿಳಾ ವರ್ಗದ ಮಹಿಳೆಯರನ್ನು ನೋಡುವ ಅಗತ್ಯವಿರುವುದಿಲ್ಲ. ಪುರುಷರೂಪಿತ ಗೃಹಿಣತ್ವದಲ್ಲಿ ಒಬ್ಬ ಗೃಹಿಣಿಯನ್ನು ಪ್ರತಿನಿಧೀಕರಿಸಿದರೆ ಉಳಿದ ಮಹಿಳೆಯರ ಚಿತ್ರಣ ದೊರೆಯುತ್ತದೆ. ವರ್ಗ, ಜಾತಿ, ರೂಪ ಹೊರತುಪಡಿಸಿದರೆ ಗೃಹಣಿಯ ಪಾತ್ರವೂ ಎಲ್ಲ ಮಹಿಳೆಯರಲ್ಲೂ ಸಮಾನವಾಗಿ ಕಾಣಬಹುದು. ಇದೇ ಅಂಶವನ್ನಿಟ್ಟುಕೊಂಡು ಮಹಾಕಾವ್ಯಗಳು ಹೆಣ್ಣಿನ ಪ್ರತಿನಿಧೀಕರಣವನ್ನು ಮಾಡುತ್ತವೆ. ಹೆಣ್ಣಿನ ಪ್ರತಿನಿಧೀಕರಣವನ್ನು ಮಾಡುವಾಗಲೂ ಅಲ್ಲಿ ಸಮಾಜದ ಒಪ್ಪಿತವಾಗಿರುವ ಸ್ಥಿರ ಮಾದರಿಯನ್ನೇ ಕಟ್ಟಿಕೊಡುತ್ತದೆ.

ಒಂದು ವೇಳೆ ಈ ಸ್ಥಿರ ಮಾದರಿಯ ಗೃಹಿಣಿತ್ವದ ಪಾತ್ರವನ್ನು ಸಮಾಜಕ್ಕೆ ಒಪ್ಪಿತ ವಾಗದ ರೀತಿಯಲ್ಲಿ ಚಿತ್ರಿಸಿದರೆ, ಉದಾಹರಣೆಗೆ ಮನೆಯ ಯಾವುದೇ ಕೆಲಸಗಳಲ್ಲಿ ತೊಡಗದೇ ಇರುವುದು, ಹೆಣ್ಣಿಗೆ ಸೂಚಿಸಿರುವಂತಹ ವಿಧೇಯತೆ, ಗೌರವ ಭಾವ, ವಿನಯ

ಶೀಲತೆ ಈ ಮಾದರಿಗಳನ್ನು ಬಿಟ್ಟು ಸ್ವತಂತ್ರವಾಗಿರುವ ಪ್ರತಿರೋಧ ವ್ಯಕ್ತಪಡಿಸುವಂತಹ ಪಾತ್ರವನ್ನು ಪ್ರತಿನಿಧಿಸುವುದಿಲ್ಲ. ಹಾಗಾಗಿ ಈ ಒಪ್ಪಿತವಾಗಿರುವಂತಹ ಪಾತ್ರಗಳನ್ನೇ ಆಯ್ಕೆ ಮಾಡಿಕೊಳ್ಳುತ್ತಾರೆ. ಹೀಗೆ ವಿವರಿಸುವಾಗ ಅನೇಕ ಪ್ರಶ್ನೆಗಳು ಎದುರಾಗುತ್ತವೆ. ಸಮಾಜದಲ್ಲಿ ಸ್ಥಾಪಿತವಾಗಿರುವ ಮಾದರಿಯ ಪಾತ್ರಗಳನ್ನೇ ಯಾಕೆ ಆಯ್ಕೆ ಮಾಡಿಕೊಳ್ಳಲಾಗುತ್ತದೆ? ಆ ಪಾತ್ರಗಳ ಆಯ್ಕೆಯ ಹಿಂದಿರುವ ಕಾರಣವೇನು? ಈ ದೃಷ್ಟಿಕೋನವೇ ಯಾಕೆ ಬೇಕು? ಪುರುಷನ ದೃಷ್ಟಿಕೋನದಲ್ಲಿ ಸಿಗುವ ಮಹಿಳೆಯ ಚಿತ್ರಣ, ಮಹಿಳೆಯರದ್ದೇ ಆಗಿರತುತದೆಯೇ? ಇದಕ್ಕಿರುವ ಪುರುಷ ಪ್ರಧಾನ ಮಾನದಂಡ ಎಂತಹದು? ಈ ಎಲ್ಲಾ ಪ್ರಶ್ನೆಗಳಿಗೂ ಉತ್ತರ ಕಂಡುಕೊಂಡಾಗ ಪ್ರತಿನಿಧೀಕರಣದ ವ್ಯಾಖ್ಯಾನವನ್ನು ಅರ್ಥೈಸಿಕೊಳ್ಳಬಹುದಾಗಿದೆ.

ಪ್ರತಿನಿಧೀಕರಣವೆಂದರೆ ಯಾವುದೇ ಘಟನೆ ಇರಬಹುದು, ಲೋಕಾನುಭವ ಇರಬಹುದು, ವ್ಯಕ್ತಿಯನ್ನು ಕುರಿತು, ಸಮುದಾಯ ಕುರಿತು, ಯಾವುದೇ ವಿಚಾರದ ಬಗ್ಗೆ ಯಾವುದೇ ಮಾಧ್ಯಮದ ಮೂಲಕ ಭಾಷಿಕ, ಭಾಷಿಕೇತರ ಸಂಜ್ಞೆಗಳನ್ನು ಬಳಸಿ ನಿರೂಪಿಸುವುದಾಗಿದೆ. ಆದರೆ ಹೇಗೆಂದರೆ ನಾವು ಯಾವುದೋ ಒಂದು ಘಟನೆಯನ್ನು ನೋಡಿ ಏನನ್ನೋ ಗ್ರಹಿಸಿದ್ದೀವಿ ಜೊತೆಗೆ ಅದನ್ನ ಯಾರ ಹತ್ತಿರವಾದರೂ ಹೇಳತ್ತೀವಿ. ಆದರೆ ನಾವು ಗ್ರಹಿಸಿರೋದು ಮತ್ತು ಹೇಳಿದ್ದು ಇವುಗಳ ಮೂಲಕ ಮೂಲ(ಗ್ರಹಿಕೆ) ಏನಿದೆ. ಅದೇ ಆಗಬೇಕಿಲ್ಲ. ಉದಾಹರಣೆಗೆ ಒಂದು ಆಕ್ಸಿಡೆಂಟ್ ನಡೆದಿದೆ ಅದನ್ನ ನೋಡಿ ಗ್ರಹಿಸಿದ ಸಂಗತಿಗಳನ್ನು ಬಂದು ಯಾರ ಹತ್ತಿರ ಅದನ್ನು ಹೇಳುತ್ತೇವೆ. ಆದ್ರೆ ಅಲ್ಲಿ ನೋಡಿದ್ದು ಗ್ರಹಿಸಿದ್ದು, ಹೇಳಿದ್ದು ಒಂದೇ ಅಲ್ಲ. ಯಾವುದೇ ಘಟನೆಯನ್ನು ಯಾರ ಹತ್ತಿರವಾದ್ರು ಹೇಳುತ್ತೀವಿ ಅಂದರೆ ಅದು ಹೇಳುವ ಕೇಳಿಸಿಕೊಳ್ಳುವವರ ಮೇಲೆ ಅವಲಂಬಿಸಿ ವ್ಯತ್ಯಾಸ ಆಗುತ್ತದೆ.

ಕನ್ನಡ ಸಂದರ್ಭದಲ್ಲಿ ಈ ಪರಿಕಲ್ಪನೆ ಹೆಚ್ಚು ಬಳಕೆಯಾಗಿದೆ. ಪ್ರಾತಿನಿಧಕವಾಗಿ ಕೆಲವು ಅಧ್ಯಯನಗಳನ್ನು ನೋಡುವುದರ ಮೂಲಕ ಈ ಅಧ್ಯಯನಗಳು ಈ ಪರಿಕಲ್ಪನೆಯನ್ನು ಯಾವ ಅರ್ಥದಲ್ಲಿ ಬಳಸಿಕೊಂಡಿವೆ ಎಂಬುದನ್ನು ನೋಡಬಹುದಾಗಿದೆ. ಮೊದಲಿಗೆ ಬಾಲನಾಗಮ್ಮ ಜನಪದ ಮಹಾಕಾವ್ಯದಲ್ಲಿ ಸ್ತ್ರೀ ಪ್ರತಿನಿಧೀಕರಣ ಎಂಬ ಅಧ್ಯಾಯವನ್ನು ನೋಡುವುದಾದರೆ ಈ ಅಧ್ಯಯನ ಹೇಳುವಂತೆ "ಸ್ತ್ರೀಪ್ರತಿನಿಧೀಕರಣ" ಎಂದರೆ ಒಂದು ವ್ಯವಸ್ಥೆ ಹೆಣ್ಣನ್ನು ನಿಯಂತ್ರಿಸುತ್ತಾ ಬಂದರೂ ಅದರಿಂದ ಅವಳು ಅನುಭವಿಸಿದ ಬದುಕನ್ನು ಪ್ರತಿನಿಧಿಸುವುದಾಗಿದೆ. ಹೆಣ್ಣು ಬದುಕಿನ ರೀತಿಯಲ್ಲೆ ಅವಳಿದ್ದ ಸಮಾಜ, ಸಂಸ್ಕೃತಿ ಹಾಗೂ ಆಳುವ ವರ್ಗ ಅವಳನ್ನು ನಡೆಯಿಸಿಕೊಂಡ ಬಗೆಯನ್ನು ಹುಡುಕುವುದಾಗಿದೆ" ಎಂಬಂತೆ

ಒಂದು ರೀತಿಯ ಬಿಂಬ, ಪ್ರತಿಬಿಂಬ ಅರ್ಥದಲ್ಲಿ ಬಳಸಿದಂತಿದೆ. ಈಗಾಗಲೇ ವ್ಯವಸ್ಥೆಯಲ್ಲಿ ಒಂದಿರುತ್ತದೆ. ಅದನ್ನು ಪ್ರತಿನಿಧಿಸೋದು ಎಂಬರ್ಥದಲ್ಲಿ ಹೇಳಲಾಗಿದೆ. ಏಕೆಂದರೆ ಇಲ್ಲಿ ಹೇಳುವಂತೆ ಸ್ತ್ರೀ ಪ್ರತಿನಿಧೀಕರಣ ಎಂದರೆ ಒಂದು ವ್ಯವಸ್ಥೆ ಹೆಣ್ಣನ್ನು ನಿಯಂತ್ರಿಸುತ್ತಾ ಬಂದರು ಅದರಿಂದ ಅವಳು ಅನುಭವಿಸಿದ ಬದುಕನ್ನು ಪ್ರತಿನಿಧಿಸುವುದಾಗಿದೆ ಎನ್ನುವಲ್ಲಿ ನಿಯಂತ್ರಿಸುವಿಕೆಯಲ್ಲಿನ ದೃಷ್ಟಿಕೋನ ಮತ್ತು ಗ್ರಹಿಕೆಗಳನ್ನು ನೋಡುವುದರ ಮೂಲಕ ಅವಳ ಅನುಭವದ ಬದುಕನ್ನು ಗ್ರಹಿಸಬೇಕಾಗುತ್ತದೆ. ಅದಾಗ್ಯೂ ಈ ಅಧ್ಯಯನದಲ್ಲಿ ಈ ಪರಿಕಲ್ಪನೆಯ ಬಗೆಗೆ ಸ್ಪಷ್ಟವಾದ ನಿಲುವು ನಿಗದಿದ್ದರೂ ಅಂತಿಮವಾಗಿ ಅಧ್ಯಯನಕಾರರ ಗ್ರಹಿಕೆ, ದೃಷ್ಟಿಕೋನಗಳು ಕೆಲಸ ಮಾಡಿರುತ್ತವೆ ಎಂದರೆ ತಪ್ಪಗಲಾರದು.

ಇನ್ನೊಂದು ಅಧ್ಯಯನವನ್ನು ನೋಡುವುದಾದರೆ "ಕರ್ನಾಟಕ ಜಾತಿಗಳ ಸಾಂಸ್ಕೃತಿಕ ಪ್ರತಿನಿಧೀಕರಣ ಮತ್ತು ವಸಾಹತುಶಾಹಿ ಅನುಭವ"ದಲ್ಲಿ ಅಧ್ಯಯನಕಾರರು ಮೊದಲಿಗೆ ತಮ್ಮ ಅಧ್ಯಯನಕ್ಕೆ ಪೂರಕವಾದ ಪ್ರತಿನಿಧೀಕರಣದ ಬಗೆಗೆ ಸಮಾಜಶಾಸ್ತ್ರಜ್ಞರ ನಿರ್ವಚನದಿಂದ ಆರಂಭಿಸುತ್ತಾರೆ. ಅದೆಂದರೆ "ಸಾಮಾಜಿಕ ಮಾನವಶಾಸ್ತ್ರದಲ್ಲಿ ಸಾಮಾನ್ಯವಾಗಿ ಪ್ರತಿನಿಧೀಕರವೆಂದರೆ ವ್ಯಕ್ತಿ ಮೂಲತಃ ಸಾಮಾಜಿಕ ಜೀವಿಯಾಗಿದ್ದು, ಆತ ಆಕೆಯ ಅಸ್ತಿತ್ವ ಮತ್ತು ಐಡೆಂಟಿಟಿಯ ಸಾಮುದಾಯಿಕ ನೆಲೆಯದ್ದಾಗಿರುತ್ತದೆ. ಆದ್ದರಿಂದ ಯಾವುದೇ ಸಾಮಾಜಿಕ ಪ್ರಕ್ರಿಯೆ ವ್ಯಕ್ತಿ ಮತ್ತು ಸಮುದಾಯದ ಚಲನೆಗಳನ್ನು ತೀವ್ರವವಾಗಿ ಪ್ರಚೋದಿಸುತ್ತಿರುತ್ತದೆ. ಆದ್ದರಿಂದ ಪ್ರತಿನಿಧೀಕರಣವೆಂದರೆ ಸಾಮುದಾಯಿಕ ಉಪಾಯಗಳು, ಆಲೋಚನೆಗಳು, ಪ್ರತಿಮೆಗಳ ಜ್ಞಾನಗಳಿಂದಾಗಿ ರೂಪುಗೊಂಡಂತಹ ಒಂದು ವಿಶ್ವಾತ್ಮಕ ಒಮ್ಮತವಾಗಿದ್ದು, ಅದು ಸಾಮಾಜಿಕ ಪ್ರಜ್ಞಾ ಪಾತಳಿಯಾಗಿರುತ್ತದೆ ಎಂದು ಹೇಳುತ್ತಾ ಪ್ರತಿನಿಧೀಕರಣದ ಸೈದ್ಧಾಂತಿಕ ನೆಲೆಗಟ್ಟನ್ನು ಬಿಡಿಸುವಾಗ ಅದರ ಅಧಿಕಾರ ಮತ್ತು ಯಜಮಾನ್ಯದ ರೂಪಗಳನ್ನು ಅರಿಯಬೇಕಾಗುತ್ತದೆ ಎಂದು ಹೇಳುತ್ತಾ ಕೊನೆಯಲ್ಲಿ ಪ್ರತಿನಿಧೀಕರಣ ವರ್ತಮಾನದ ಸಾಮಾಜಿಕ, ರಾಜಕೀಯ ವ್ಯವಸ್ಥೆಗೆ ಸಮ್ಮತಿಯನ್ನು ಪಡೆದುಕೊಳ್ಳುತ್ತಾ ಸ್ಥಿರತೆಯನ್ನು ಕಾಯ್ದು ಕೊಳ್ಳುತ್ತದೆ ಎಂದು ಹೇಳಿದ್ದಾರೆ.

ಇನ್ನು ಪ್ರಸ್ತುತ ಅಧ್ಯಯನಕ್ಕೆ ಬರುವುದಾದರೆ ಮಹಿಳೆ ಬೇರೆ ಬೇರೆ ರೀತಿಯಲ್ಲಿ ಇರಬಹುದು, ಆದರೆ ಬಾಲನಗಮ್ಮ ಜನಪದ ಮಹಾಕಾವ್ಯದಲ್ಲಿ ಮಹಿಳಾ ಪ್ರತಿನಿಧೀಕರಣ ಎನ್ನುವಾಗ ಬಾಲನಾಗಮ್ಮ ಕಾವ್ಯದಲ್ಲಿ ಮಹಿಳೆಯನ್ನು ಯಾವ ರೀತಿ ಪ್ರತಿನಿಧಿಸಿದ್ದಾರೆ ಮತ್ತು ಯಾಕೆ ಪ್ರತಿನಿಧಿಸುತ್ತಾರೆ. ಹೀಗೆ ಪ್ರತಿನಿಧಿಸುವಾಗ ಕಾವ್ಯದ ಗ್ರಹಿಕೆ ಏನಾಗಿರುತ್ತದೆ ಹಾಗೂ ಈ ಕಾವ್ಯದಲ್ಲಿ ಮಹಿಳೆಯನ್ನು ಪ್ರತಿನಿಧಿಸುವಲ್ಲಿ ಅದು ರೂಪಿಸುವ ವಾಸ್ತವ ಯಾವುದು

ಎಂಬುದನ್ನು ನೋಡುವುದರ ಮೂಲಕ ಸಾಹಿತ್ಯ ವಿದ್ಯಾರ್ಥಿಯಾದ ನಾನು ಯಾವ ರೀತಿ ಗ್ರಹಿಸುತ್ತೀನಿ ಮತ್ತು ಈ ಮೂಲಕ ನನ್ನ ದೃಷ್ಟಿಕೋನ ಮತ್ತು ಒತ್ತಡಗಳಿಗನುಗುಣವಾಗಿ ಗ್ರಹಿಸಿದ್ದನ್ನು ಯಾವ ರೀತಿ ಅಭಿವ್ಯಕ್ತಿಸುತ್ತೇನೆ ಎಂಬುದು ಮುಖ್ಯವಾಗುತ್ತದೆ.

ಒಟ್ಟಿನಲ್ಲಿ ಬೌದ್ಧಿಕ, ಸಾಂಸ್ಕೃತಿಕ ಒತ್ತಡಗಳಿಗನುಗುಣವಾಗಿ ಪ್ರತಿನಿಧೀಕರಣಗಳು ಭಿನ್ನವಾಗುತ್ತವೆ. ಉದಾಹರಣೆಗೆ ಒಂದು ಘಟನೆಯನ್ನು ಸಮಾಜವಿಜ್ಞಾನಿಗಳು ಪ್ರತಿನಿಧಿಸುವ ಕ್ರಮವೇ ಬೇರೆ, ಸಾಹಿತಿಗಳು ಪ್ರತಿನಿಧಿಸುವ ಕ್ರಮವೇ ಬೇರೆ. ಆದ್ದರಿಂದ ಇಲ್ಲಿ ಯಾವ ಗ್ರಹಿಕೆ ಸರಿ ಯಾವ ಗ್ರಹಿಕೆ ತಪ್ಪು ಎನ್ನುವುದು ಮುಖ್ಯ ಅಲ್ಲ. ಯಾರು ಮತ್ತು ಏಕೆ ಈ ಘಟನೆಯನ್ನು ಪ್ರತಿನಿಧಿಸುತ್ತಾರೆ ಎಂಬ ಪ್ರಶ್ನೆ ಮಾತ್ರ ಮುಖ್ಯವಾಗುತ್ತದೆ. ಜೊತೆಗೆ ಈಗಾಗಲೇ ಹೇಳಿದಂತೆ ಸಾಮಾಜಿಕ ಚಿಂತನೆಗಳು ಕಾಲಕ್ಕನುಗುಣವಾಗಿ ಬದಲಾದಂತೆ ಪ್ರತಿನಿಧೀಕರಿಸಿದ ಹಿಂದಿನ ತತ್ವಗಳು ಸಾಮಾಜಿಕ ಸ್ಥಿತಿಗತಿಗಳನ್ನು ವಿವರಿಸಬಹುದೇ ವಿನಃ ಸರಿ, ತಪ್ಪು ಎಂದು ಹೇಳಲಿಕ್ಕಾಗದು.

**ತಾತ್ವಿಕತೆ**

ಕಾವ್ಯದಲ್ಲಿ ತಾತ್ವಿಕತೆಯ ಪಾತ್ರ ಬಹು ಸಂಕೀರ್ಣವಾದದು. ಈ ಕುರಿತು ಚರ್ಚೆ ದೀರ್ಘಕಾಲದಿಂದ ನಡೆದುಕೊಂಡು ಬಂದಿದೆ. ಚರ್ಚೆಯ ವಿವಿಧ ಹಂತಗಳಲ್ಲಿ ಈ ಎರಡು ಸಂಗತಿಗಳ ಸ್ಥಾನಗಳಲ್ಲಿ ಅನೇಕ ಪಲ್ಲಟಗಳುಂಟಾಗಿವೆ. ಹೊಸ ತಿಳವಳಿಕೆಗಳು ಹುಟ್ಟಿವೆ. ತತ್ವಶಾಸ್ತ್ರ ತತ್ತ್ವಜ್ಞಾನಗಳಿಗೆ ಅನುಗುಣವಾಗಿ ಸಾಹಿತ್ಯ ರಚನೆಯಾಗುವುದೆಂಬ ವಾದಗಳಿಂದ ತೊಡಗಿ ಸಾಹಿತ್ಯದ ಸ್ವತಂತ್ರ ಸಾಕ್ಷಿತ್ವವನ್ನು ಎತ್ತಿ ಹಿಡಿಯುವ ವಾದಗಳವರೆಗೆ ಶತಮಾನಗಳ ಕಾಲದಿಂದ ನಡೆದು ಬಂದಿರುವ ಚಿಂತನ-ಮಂಥನಗಳ ವಿಸ್ತಾರವಿದೆ. ಇಂಥ ವಾದಗಳ ಒಂದು ತುದಿಯಲ್ಲಿ ಸಾಹಿತ್ಯವು ತತ್ತ್ವಶಾಸ್ತ್ರದ ಉಪಕರಣದಂತೆ ಕಂಡರೆ, ಇನ್ನೊಂದು ತುದಿಯಲ್ಲಿ ತತ್ತ್ವವಿಚಾರಗಳು ಸಾಹಿತಿಯ ಉಪಕರಣಗಳಲ್ಲಿ ಒಂದೆಂದು ಗ್ರಹಿಸಲಾಗುತ್ತಿದೆ. ಸಾಹಿತ್ಯವನ್ನು ಕಾವ್ಯ ಪ್ರತಿಮೆಗಳಿಗೆ ಅಳವಡಿಸಿದ ತಾತ್ತ್ವಿಕ ತಿಳುವಳಿಕೆ ಎಂದು ಒಂದು ಬಗೆಯ ಚಿಂತನ ಕ್ರಮ ಭಾವಿಸುತ್ತದೆ. ಇನ್ನೊಂದು ಬಗೆಯ ಚಿಂತನ ಕ್ರಮ ಕಾವ್ಯದಲ್ಲಿ ತತ್ತ್ವವಿಚಾರಗಳು ಮೈಗೂಡಿಸಿಕೊಂಡಿರಬೇಕೇ ಹೊರತು ಮನೆ ಮಾಡಿಕೊಂಡ ವಲಸೆ ಹಕ್ಕಿಗಳಾಗಬಾರದು ಎಂದು ನಿರೀಕ್ಷಿಸುತ್ತದೆ. ಇದು ಸ್ಥೂಲವಾಗಿ ವಿವಿಧ ನಿಲುವುಗಳ ಕುರಿತು ಹೇಳಬಹುದಾದದ್ದು. ವಿವರವಾಗಿ ಅಭ್ಯಾಸದಲ್ಲಿ ಈ ಎರಡು ತುದಿಗಳ ನಡುವಿನ ಇನ್ನಷ್ಟು ಅಭಿಪ್ರಾಯಗಳನ್ನು ಕಾಣಬಹುದು. ಅಲ್ಲಲ್ಲಿ ಅಭಿಪ್ರಾಯಗಳು ಬೆರೆಯುವುದುಂಟು. ಕೆಲವೊಮ್ಮೆ ಹೊರನೋಟಕ್ಕೆ ಸ್ವ-ವಿರೋಧವುಳ್ಳ ಹೇಳಿಕೆಗಳಾಗಿ ಕಾಣುವುದುಂಟು. ಅದು ಹೋಗಿದ್ದರೂ

ಭಾರತೀಯ ಕಾವ್ಯ ಮೀಮಾಂಸೆಯಲ್ಲೂ ಪಾಶ್ಚಾತ್ಯಕಾವ್ಯ ಮೀಮಾಂಸೆಯಲ್ಲೂ ಇವೆರಡೂ ಮೀಮಾಂಸೆಗಳೂ ತತ್ತ್ವ ಮಂಥನಕ್ಕೆ ಏಕಾಕಲದಲ್ಲಿ ಒಳಪಡುವ ಆಧುನಿಕ ಹೊಸ ತಿಳುವಳಿಕೆಯ ಲೇಖನಗಳಲ್ಲೂ ಕಾವ್ಯ ಮತ್ತು ತಾತ್ವಿಕತೆಗಳ ಸಂಬಂಧ ಪಡೆಯುವ ವಿನ್ಯಾಸಗಳನ್ನು ವಿವರವಾಗಿ ಅರಿಯುವುದು ಲಾಭದಾಯಕ. ಈ ಕುರಿತ ಅಭ್ಯಾಸ ಪರಿಶೀಲನೆ ಮುನ್ನಡೆಸುವ ಮುನ್ನ ತಾತ್ತ್ವಿಕತೆಯ ಪರಿಕಲ್ಪನೆಯನ್ನು ಸ್ಪಷ್ಟಪಡಿಸಿಕೊಳ್ಳುವುದು ಅವಶ್ಯಕ.

ಜೀವನದ ರಹಸ್ಯಾಂಶಗಳ ಕುರಿತು ಕಾವ್ಯವು ತನ್ನ ಅಂತರಂಗದೊಳಗೆ ತೋರುವ ಪ್ರಸಕ್ತಿಯೇ ಅದರ ತಾತ್ತ್ವಿಕತೆ ಆಗಿರುತ್ತದೆ. ಜೀವ, ಜಗತ್ತು, ಜೀವನ, ಇಂದ್ರಿಯ ಗ್ರಹಿಕೆಗೆ ನಿಲುಕುವ ಮತ್ತು ನಿಲುಕದ ಸಂಗತಿಗಳು ಮುಂತಾದವುಗಳ ಕುರಿತು ಕಾವ್ಯವು ತಳೆಯುವ ನಿಲುವು, ಪಡೆದಿರುವ ತಿಳುವಳಿಕೆ, ಶೋಧಿಸಬಯಸುವ ಅಂಶಗಳು ಲೋಕ ಜೀವನದ ಬೀಜಾರ್ಥ, ಗೂಡಾರ್ಥ, ಒಡಪು, ರಹಸ್ಯಮಯತೆ ಮುಂತಾಗಿಯೂ ವರ್ಣಿಸಬಹುದಾದ ಸಂಗತಿಯನ್ನು ತಾತ್ತ್ವಿಕತೆ ಎಂದು ಕರೆಯಲಾಗಿದೆ. ಈ ಹಿಡಿಗಟ್ಟು ಕವಿಯ ಜೀವನದೃಷ್ಟಿ, ದರ್ಶನ, ತತ್ತ್ವಗ್ರಹಿಕೆ, ಲೋಕಗ್ರಹಿಕೆ, ನೋಟಕ್ರಮವನ್ನು ಸೂಚಿಸುವಂಥದು. ಈ ದೃಷ್ಟಿ, ದರ್ಶನಗಳ ರೂಪುಗೊಳ್ಳುವ ಬಗೆಗಳ ಅನೇಕ ವಿಧಗಳಾಗಿರಲು ಸಾಧ್ಯ. ಇನ್ನೊಂದುಬಗೆಯಲ್ಲಿ ವ್ಯಾಖ್ಯಾನಿಸಬಹುದಾದರೆ ಕಾವ್ಯ ಪ್ರಕ್ರಿಯೆಯಲ್ಲಿ ಪ್ರವೃತ್ತಗೊಂಡ ಕವಿಯ ಲೋಕಗ್ರಹಿಕೆಯನ್ನು ವಿಶ್ಲೇಷಣೆಯ ಮೂಲಕ 'ತಾತ್ತ್ವಿಕತೆ'ಯಾಗಿ ಹೊರತುಪಡಿಸಿ ತೋರಬಹುದು. ಅಂದರೆ ತಾತ್ತ್ವಿಕತೆಯು ಅನುಭವ ಲೋಕದ ಕುರಿತು ಕವಿಯ ಮೂಲಭೂತ ಧಾರಣೆಗಳನ್ನು ಸೂಚಿಸುವಂಥದ್ದು. ಈ ದೃಷ್ಟಿ, ದರ್ಶನಗಳು ರೂಪುಗೊಳ್ಳುವ ಬಗೆಗಳು ಅನೇಕ ವಿಧ ಗಳಾಗಿರಲು ಸಾಧ್ಯ. ಇನ್ನೊಂದು ಬಗೆಯಲ್ಲಿ ವ್ಯಾಖ್ಯಾನಿಸಬಹುದಾದರೆ ಕಾವ್ಯ ಪ್ರಕ್ರಿಯೆಯಲಲಿ ಪ್ರವೃತ್ತಗೊಂಡ ಕವಿಯ ಲೋಕಗ್ರಹಿಕೆಯನ್ನು ವಿಶ್ಲೇಷಣೆಯ ಮೂಲಕ ತಾತ್ತ್ವಿಕತೆಯಾಗಿ ಹೊರತುಪಡಿಸಿ ತೋರಬಹುದು. ಅಂದರೆ ತಾತ್ತ್ವಿಕತೆಯ ಅನುಭವ ಲೋಕದ ಕುರಿತು ಕವಿಯ ಮೂಲಭೂತ ಧಾರಣೆಗಳನ್ನು ಸೂಚಿಸುವಂಥದ್ದು ಒಂದು ಕಲಾಕೃತಿಯನ್ನು ರೂಪಿಸುವ, ಅದರಲ್ಲಿ ವಸ್ತುವನ್ನು ಸಂಗತಿಯನ್ನು ಸನ್ನಿವೇಶವನ್ನು ಹೇಗೆ ನೋಡಬೇಕು, ಎಷ್ಟು ನೋಡಬೆಕು ಎಂಬುದನ್ನು ನಿರ್ಣಯಿಸುವುದು ಕವಿಯ ಗ್ರಹಿಕೆಯ ವಿಧಾನವೇ. ಕವಿಯ ಅನುಭವವನ್ನು ತೂಗಿ ಬೆಲೆಗಟ್ಟುವ ವಿಧಾನವೆಂದೂ ತಾತ್ತ್ವಿಕತೆಯನ್ನು ವರ್ಣಿಸಬಹುದು. ಕಾವ್ಯದಲ್ಲಿ ಅನುಭವಗಳ ಶೋಧನ, ಸಂಸ್ಕರಣಗಳು ನಡೆದಿರುತ್ತವೆ. ಉರಿಯ ಸಂಕಲನವಲ್ಲ. ಇಂಥ ಮಂಥನಕ್ಕೆ ಕಡಗೋಲು ತಾತ್ತ್ವಿಕತೆ.

ಬೀಜರೂಪಿಯಾಗಿ ತಾತ್ತ್ವಿಕತೆ ಕಾವ್ಯದ ಅಂತರಂಗದಲ್ಲಿ ಉಸಿರಾಡುತ್ತಿರುತ್ತದೆ. ಕಾವ್ಯದೊಳಗೆ ಕಾರ್ಯನಿರ್ವಹಿಸುತ್ತಿರುವ ಕವಿಯ ಲೋಕಗ್ರಹಿಕೆಯನ್ನು ವ್ಯಾಖ್ಯಾನಕ್ಕೆ

ಒಳಪಡಿಸಿದಾಗ ತಾತ್ತ್ವಿಕತೆ ಒಡಮೂಡುತ್ತದೆ. ಕಾವ್ಯದಚೌಕಟ್ಟಿನಲ್ಲಿ ನಡೆದ ಅನುಭವಗಳ ಸಂಸ್ಕರಣ ಇಂಥ ವೈಚಾರಿಕ ರೂಪವನ್ನು ತಾಳುತ್ತದೆ. ಕಾವ್ಯದೊಳಗೆ ಭಾವನೆ ಮತ್ತು ಐಂದ್ರಿಯಕ ಸಂವೇದನೆಗಳೊಂದಿಗೆ ಬೆರತುಹೋದ ತತ್ತ್ವಾಂಶವನ್ನು ಚರ್ಚೆಯ ಅನುಕೂಲಕ್ಕಾಗಿ ಪ್ರತ್ಯೇಕಿಸಿ ನೋಡುತ್ತೇವೆ. ಅದು ಅಷ್ಟು ಸುಲಭವಾಗಿ ಪ್ರತ್ಯೇಕಗೊಳಿಸಬಲ್ಲ ಸಂಗತಿಯಲ್ಲ ಎಂಬುದೂ ನಿಜವೇ. ಹೂವಿನ ಪರಿಮಳದಂತೆ, ಹಣ್ಣಿನ ಸವಿಯಂತೆ, ಬಾನ ನೀಲಿಯಂತೆ, ಪ್ರತಿಬಾಲೋಲಕದ ಕಿರಣಗಳಂತೆ ಬೆರೆತ ತಾತ್ತ್ವಿಕತೆಯನ್ನು ಕಾವ್ಯದ ಆಕೃತಿಯೊಳಗೆ ಹುಡುಕಬೇಕಾಗುತ್ತದೆ. ತಾತ್ತ್ವಿಕ ಒಳವಿನ್ಯಾಸವನ್ನು ರಚಿಸಿಕೊಳ್ಳಬೇಕಾಗುತ್ತದೆ. ಒಂದು ಕಾವ್ಯದ ಅನುಭವ ಗಾಢವಾಗುವುದು. ಗಹನ ಎನಿಸುವುದು ಅದರೊಳಗೆ ನಡೆವ ತತ್ತ್ವಮಂಥನ ಪ್ರಕ್ರಿಯೆಗಳಿಂದಲೇ. ಅಂದರೆ ಒಂದು ಕಾವ್ಯಕೃತಿಯು ಮೌಲಿಕತೆಯನ್ನು, ವಿಶಿಷ್ಟತೆಯನ್ನು, ಅನನ್ಯತೆಯನ್ನು ಬಹುದೊಡ್ಡ ಪ್ರಮಾಣದಲ್ಲಿ ನಿಧರಿಸುವುದು ಅದರ ತಾತ್ವಿಕತೆಯೇ. ಇದು ಕಾವ್ಯದ ಆಕೃತಿಯೊಳಗೇ ನಾವು ರೂಪಿಸಿಕೊಳ್ಳಲು ಸಾಧ್ಯವಿರುವ ತತ್ತ್ವವಿನ್ಯಾಸದ ಕುರಿತು ಹೇಳುತ್ತಿರುವ ಮಾತು. ತಾತ್ತ್ವಿಕತೆಯ ಹೀಗೆ ಕಾವ್ಯದ ಸಾವಯುವ, ಜೀವಂತ ಘಟಕವೇ ಆಗಿದೆ. ಆ ಮೂಲಕ ಕಾವ್ಯದ ಜೀವ ಮಿಡಿತ, ಸ್ಪಂದನವನ್ನು ಅನುಭವಿಸಲು ಸಾಧ್ಯವಿದೆ. ಸಾಹಿತ್ಯದೊಳಗೆ ಪ್ರವೇಶಿಸಿದ ವಿಚಾರಗಳು ತಮ್ಮ ಮೂಲ ಸ್ವರೂಪದಲ್ಲೇ ಉಳಿದಿರುವುದಿಲ್ಲ. ಅವು ಪ್ರತೀಕಗಳಾಗಿ, ಪ್ರತಿಮೆಗಳಾಗಿ ರೂಪಾಂತರಗೊಂಡಿರುತ್ತವೆ. ಒಂದುಕಲಾಕೃತಿ, ಒಂದು ಕಾವ್ಯ ತತ್ತವ ಹುಟ್ಟು ಹಾಕುವ ನಮ್ಮ ಅರಿವನ್ನು ಹಿಗ್ಗಿಸುವ ಶಕ್ತಿ ಪಡೆಯುವುದು ಕವಿಯ ರೂಪಕ ಪ್ರತಿಭೆ ಕಾವ್ಯ ಕ್ರಿಯೆಯನ್ನೇ ಚಿಂತನ ಕ್ರಿಯೆಯನ್ನಾಗಿಯೂ ಮಾಡಬಲ್ಲ ಪುನರ್ ಸೃಷ್ಟಿಯ ಬಿಸಿಲಿನಲ್ಲಿ ಕೆಲಸ ಮಾಡಲು ತೊಡಗಿದಾಗ, ಉಪದೇಶಾತ್ಮಕ ಕಾವ್ಯ ಮಾದರಿಗಳಲ್ಲಿ ಮಾತ್ರ ತತ್ತ್ವಗಳು ತಕ್ಕಮಟ್ಟಿಗೆ ಮೂಲಸ್ವರೂಪದಲ್ಲೇ ಉಳಿದಿರಲು ಸಾಧ್ಯ. ಕಾವ್ಯದ ಛಂದೋ ಆಕೃತಿಯ ಒಳಗೆ ಅಲ್ಲಿಯೂ ಉಪಮೆಗಳ, ರೂಪಕಗಳ, ಅಲಿಗರಿಗಳ ಸಹವಾಸದಲ್ಲಿ ಅವು ಸಾಕಷ್ಟು ಭಿನ್ನರೂಪವನ್ನೇ ಪಡೆದಿರುತ್ತೆ ಎನ್ನಬೇಕು.

ಕವಿಯ ಕಾವ್ಯದ ಮೂಲದ್ರವ್ಯ ಜೀವನಾನುಭವವೇ. ಆದರೆ ತಾತ್ತ್ವಿಕ ದೃಷ್ಟಿಕೋನ ಅದಕ್ಕೊಂದು ಆಕೃತಿಯನ್ನು ಕಲ್ಪಿಸುತ್ತದೆ. ನಾವು ಪಡೆಯುವ ಅರ್ಥ ಗ್ರಹಿಕೆಗೆಲ್ಲವೂ ನಮಗೆ ಆಕೃತಿಯ ಮೂಲಕವೇ ಲಭ್ಯವಾಗುವುದು. ಕವಿ ತನ್ನ ಅನುಭವದ ಎಲ್ಲಾ ಅಂಶಗಳನ್ನೂ ಅಂಗಗಳನ್ನೂ ಒಂದು ಕೇಂದ್ರಕ್ಕೆ ಒಳಪಡಿಸುವುದು ತಾತ್ತ್ವಿಕತೆಯ ಮೂಲಕ ಮಾತ್ರವೇ ಸಾಧ್ಯ. ಗಂಭೀರ ಆಸಕ್ತಿಗಳ ಪ್ರಧಾನ ಕವಿಗಳು ತತ್ತ್ವಗಳಿಗೆ ತತ್ತ್ವ ಮಂಥನಕ್ಕೆ ಹಿಂಜರಿಯು ವುದಿಲ್ಲ. ಹಾಗೆ ಭಾವಿಸುವವರು ತುಂಬಾ ಗಾಢವಾದ ಅನುಭವಕ್ಕೆ ಕಾರಣವಾಗಬಲ್ಲ ಸಾಹಿತ್ಯ ಸೃಷ್ಟಿಸಲಾರರು. ಗಾಡ ತತ್ತ್ವಾಂಶಗಳಿಂದ ನಮ್ಮನ್ನು ಆಳವಾಗಿ ಪ್ರಭಾವಿಸಲಾರದ ಸಾಹಿತ್ಯ

ಕೃತಿಯ ಸೌಂದರ್ಯ ನಮ್ಮ ಅನುಭವವನ್ನು ಹಿಗ್ಗಿಸಲಾರದು, ಪೋಷಿಸಲಾರದು. ಮುಖ್ಯ ಕಾಳಜಿಗಳ ಕವಿ ತತ್ತ್ವ ವಿಚಾರಗಳನ್ನೂ ತನ್ನ ಕಾರಣಗಳನ್ನಾಗಿ ಬಳಸಿಕೊಳ್ಳುವ ಸಾಮರ್ಥ್ಯಕ್ಕೆ ತೊಡಗುತ್ತಾನೆ. ಕಲಾಕೃತಿಯ ಗಹನತೆಗೆ ಅದರ ತತ್ತ್ವ೧ ಜಿಜ್ಞಾಸೆ ಕಾರಣವಾಗುವುದೆಂದಷ್ಟೇ ಕೃತಿಯ ತತ್ತ್ವ ಭೂಮಿಕೆಯು ಅದರ ಕಲಾತ್ಮಕ ಆಶಯಗಳಿಗೆ ಒಳಪಟ್ಟು ವರ್ತಿಸಬೇಕಾಗುತ್ತದೆ ಎನ್ನುವುದು ನಿಜ. ಒಂದು ಕಲಾಕೃತಿಯ ಚೌಕಟ್ಟಿನಲ್ಲಿ ತತ್ತ್ವಗಳ ಜೀವನಾನುಭವದ ನಿಕಷದಲ್ಲಿ ಪರೀಕ್ಷೆಗೆ ಒಳಗಾಗುತ್ತವೆ. ತತ್ತ್ವಶಾಸ್ತ್ರ ಅಥವಾ ತತ್ತ್ವಜ್ಞಾನದಲ್ಲಿ ತತ್ತ್ವಗಳು ಖಚಿತರೂಪದ ಅಭಿಪ್ರಾಯಗಳಾಗಿ, ವಾಕ್ಯಗಳಾಗಿ, ಸಿದ್ಧಾಂತಗಳಾಗಿ ವ್ಯಕ್ತವಾಗುತ್ತವೆ. ಆದರೆ ಕಾವ್ಯ ಮಾಧ್ಯಮವು ಅಂಥ ಖಚಿತತೆಯನ್ನು ಸೂಕ್ಷ್ಮವಾಗಿ ಪ್ರಶ್ನಿಸುತ್ತದೆ ಮತ್ತು ಪರೀಕ್ಷೆಗೊಡ್ಡುತ್ತದೆ. ಅಂದರೆ ತತ್ತ್ವಶಾಸ್ತ್ರಜ್ಞ ತತ್ತ್ವ ವಿಚಾರಗಳಲ್ಲಿ ತೊಡುಗವ ಕ್ರಿಯೆ ಮತ್ತು ಕಾವ್ಯದಲ್ಲಿ ತತ್ತ್ವ ವಿಚಾರಗಳು ಶೋಧಿತಗೊಳ್ಳುವ ಕ್ರಿಯೆ ಮೂಲಸ್ವರೂಪದಲ್ಲೇ ಸಾಕಷ್ಟು ಭಿನ್ನವಾದ ಕಾವ್ಯವು ಎಲ್ಲ ಸಂದರ್ಭಗಳಲ್ಲೂ ತಾತ್ತ್ವಿಕ ನೆಲೆಗಳ ಮೂಲಕವೇ ಅಥವಾ ವೈಚಾರಿಕ ಆಕೃತಿಗಳ ಮೂಲಕವೇ ತನ್ನ ವಸ್ತು ಲೋಕವನ್ನು ಎದುರುಗೊಳ್ಳುವುದಿಲ್ಲ. ಸೃಷ್ಟಿಶೀಲತೆಯ ಪ್ರೇರಣೆಗಳು ಅನೇಕ ಸ್ವರೂಪದವು. ಆದರೆ ಕಾವ್ಯ ಸೃಷ್ಟಿಯ ಪ್ರಧಾನ ಹಂತಗಳನ್ನು ತಾತ್ತ್ವಿಕತೆಯೇ ನಿರ್ವಹಿಸುತ್ತದೆ. ಆ ತಾತ್ತ್ವಿಕತೆ ಕವಿಯ ಲೋಕಗ್ರಹಿಕೆಯನ್ನೇ ರೂಪಿಸುವಷ್ಟು ಆಳವಾದ ಸಾಮರ್ಥ್ಯ ಹೊಂದಿರುವುದರಿಂದ ಅನೇಕ ಸಲ ಕವಿಯೂ ಪ್ರಜ್ಞಾಪೂರ್ವಕವಾಗಿ ಗರಹಿಸಿರದ ಅನೇಕ ಸಂಗತಿಗಳನ್ನು ಅದು ಒಳಗೊಂಡಿರುತ್ತದೆ. ಅಂಥ ಅನೇಕ ಅಂಶಗಳು ಕಾವ್ಯ ಸೃಷ್ಟಿಯ ಬಳಿಕವೇ ಕವಿಯೂ ಹೊಸದಾಗಿ ಕಂಡುಕೊಳ್ಳುವ ಸಾಧ್ಯತೆಗಳಿವೆ. ಹಾಗಲ್ಲದೆಯೂ ಗ್ರಹಿಸಿದ ಅನೇಕ ಸಂವೇದನಾತ್ಮಕ ಅನುಭವಗಳ ವೈಚಾರಿಕ ಸ್ವರೂಪ ಎಂದು ಹೇಳಬಹುದು. ಅನುಭವಗಳ ಸಂಕಲನ ಮತ್ತು ನಿವೇದನೆ ಮಾತ್ರವಲ್ಲದೆ ಅವುಗಳ ಶೋಧವನ್ನು ಕವಿಕಾರ್ಯ ಒಳಗೊಳ್ಳುವಾಗ ಅದಕ್ಕೆ ತಕ್ಕಂತೆ ಭಾಷೆಯೂ ಅಂಥ ಪರೀಕ್ಷಣದ ಸ್ವರೂಪವನ್ನು ಪಡೆಯ ಬೇಕಾಗುತ್ತದೆ. ಆಡುಭಾಷೆ ಅನೇಕ ಬಗೆಯ ವಕ್ರೀಕರಣ ಕ್ರಿಯೆಗಳಿಂದ ಕಾವ್ಯಭಾಷೆಯ ರೂಪ ಪಡೆಯುತ್ತದೆ. ಲೋಕೋಪಯೋಗಿಯಾದ ಭಾಷೆ ಕಾವ್ಯೋಪಯೋಗಿಯಾಗಲು, ಭಾವೋಪಯೋಗಿಯಾಗಲು ಮತ್ತು ಶೋಧನ ಪರೀಕ್ಷಣಗಳನ್ನೊಳಗೊಂಡ ಹೊಸ ಸೃಷ್ಟಿಯ ಅಭಿವ್ಯಕ್ತಿಯಾಗಲುಪಡೆಯುವ ರೂಪಾಂತರ. ಅನೇಕ ಆಯಾಮಗಳುಳ್ಳದು. ಭಾಷೆಗೆ ಅಂತ ಸಾಮರ್ಥ್ಯ ತಂದುಕೊಳ್ಳದೆ ಕಾವ್ಯ ಅನುಭವ ನಿವೇದನೆಯ ಸಾರ್ಥಕ ಮಾಧ್ಯಮವಾಗಲಾರದು.

ಕಾವ್ಯವೊಂದರಲ್ಲಿ ಒಡಮೂಡುವ ತಾತ್ತ್ವಿಕತೆ ಅಥವಾ ತತ್ತ್ವವಿಚಾರಗಳ ಕಲಾತ್ಮಕ ಮೌಲ್ಯವೇನು? ತತ್ತ್ವ ಗಾಢವಾದದ್ದು, ಗಂಭೀರವಾದ ದ್ದು ಎಂಬ ಕಾರಣಕ್ಕಾಗಿ ಒಂದು ಕಲಾಕೃತಿ ಶ್ರೇಷ್ಠವೆಂದು ಹೇಳಲು ಸಾಧ್ಯವೆ? ಕೃತಿಯ ಕಲಾತ್ಮಕ ಅಂಶಗಳನ್ನು ಮರೆಮಾಡಿ,

ಉಲ್ಲಂಘಿಸಿ ಅಥವಾ ನಿರಾಕರಿಸಿ ಅದರ ತಾತ್ತ್ವಿಕತೆ ಬೆಳೆಯಲು ಸಾಧ್ಯವೇ? ಬೆಳದರೆ ಸಾಧುವೆ? ಇದುಕಾವ್ಯ ಮತ್ತು ತಾತ್ತ್ವಿಕತೆಗಳ ಸಂಬಂಧದಲ್ಲಿ ಕೇಳಿಕೊಳ್ಳಬೇಕಾದ ಮಹತ್ವದ ಪ್ರಶ್ನೆ ತತ್ತ್ವವಿಚಾರಗಳು ಗಹನವಾಗಿದ್ದು ಅವು ಕೃತಿಯ ಅನುಭವ ಪ್ರಪಂಚವನ್ನು ಪರಿಶೀಲನೆಗೊಳಪಡಿಸುವ ಪರಿಕ್ರಮವಾಗಿ ಸಲ್ಲದಿದ್ದಲ್ಲಿ ಕೃತಿಯ ಕಲಾತ್ಮಕ ಆಶಯಗಳಿಗೆ ಭಂಗ ತರುವಂತೆ ತತ್ತ್ವವಿಚಾರಗಳು ಪ್ರಯುಕ್ತವಾಗಿದ್ದಲ್ಲಿ ಅಂಥ ಕೃತಿಗಳು ಕಾವ್ಯ ಮತ್ತು ತಾತ್ತ್ವಿಕತೆಗಳ ಸಂಬಂಧದ ಸೂಕ್ತ ಮಾದರಿಗಳೆನಿಸಲಾರವು. ತತ್ತ್ವ ವಿಚಾರಗಳು ಸಹ ಕಾವ್ಯದೊಳಗೆ ಕಲಾತ್ಮಕ ವಸ್ತುಗಳೇ ಆಗಿರುತ್ತವೆ. ಅವು ಕವಿಯ ಸೃಷ್ಟಿಕಾರ್ಯದ ಆಳ-ಅಗಲಗಳನ್ನು ವರ್ಧಿಸುತ್ತವೆ. ಕವಿಯ ಸೃಷ್ಟಿಕ್ರಿಯೆ ಶೋಧನೆಯ, ಚಿಂತನೆಯ, ಸಂಸ್ಕರಣದ, ಹೊಸ ತಿಳುವಳಿಕೆಯ ಶಕ್ತಿ ಸಾಮರ್ಥ್ಯಗಳನ್ನು ಸಂಪಾದಿಸುವುದು ತನ್ನ ತಾತ್ತ್ವಿಕ ಒಳನೋಟಗಳಿಂದಲೇ ಹೀಗೆ ತಾತ್ತ್ವಿಕತೆ ಕಲಾಕೃತಿಯೊಳಗೆ ಕಲಾವಸ್ತುವಾಗಿ ಪರಿಣಮಿಸುತ್ತದೆ ಮತ್ತು ಕಲಾನುಭವದ ಸಂಕೀರ್ಣತೆಗೆ ಕಾರಣವಾಗುತ್ತದೆ. ಕಾವ್ಯದ ಕಲಾಮೌಲ್ಯವನ್ನು ಅದು ದೊಡ್ಡ ಪ್ರಮಾಣದಲ್ಲಿ ವರ್ಧಿಸುತ್ತದೆ. ಕಾವ್ಯದ ಶ್ರೇಷ್ಠತೆಯನ್ನು ನಿರ್ಣಯಿಸುವ ಮಾನದಂಡಗಳಲ್ಲಿ ಖಂಡಿತವಾಗಿ ಅದು ಪ್ರಧಾನವಾದುದು.

ತಾತ್ತ್ವಿಕತೆ ಬದುಕಿನ ಮೂಲ ಸಂಗತಿಗಳೊಡನೆ ಕಾವ್ಯವು ತೊಡಗಿಸಿಕೊಳ್ಳುವ ಕ್ರಮ ಎಂದು ಈಗಾಗಲೇ ವಿಶ್ಲೇಷಿಸಿದೆ. ಇದರೊಡನೆ ಪೂರಕವಾಗಿ ಹೇಳಬಹುದಾದ ಮಾತೆಂದರೆ ಅದು ವಾಸ್ತವಿಕತೆಯನ್ನು ಕೃತಿಯೊಂದು ಗ್ರಹಿಸುತ್ತಿರುವ ಕ್ರಮವೂ ಹೌದು. 'ತತ್ತ್ವಬ' ಎಂಬುದಕ್ಕೆ ಏನಿರೂವುದೋ ಅದು, ಸ್ವರೂಪ, ಸಾರ, ಸತ್ಯ, ಸಿದ್ಧಾಂತ ಎಂಬ ಅರ್ಥಗಳಿವೆ. ಅದುದರಿಂದ ಕಾವ್ಯ ಮತ್ತು ತಾತ್ತ್ವಿಕತೆಗಳ ಸಂಬಂಧ ಎಂದರೆ ಕಾವ್ಯ(ಕಲೆ) ವಸ್ತು ಸತ್ಯದ ಸಂಬಂಧವೇ ಆಗಿದೆ. ದರೆ ಏನಿರುವುದೋ ಅದು ಸನಿವೆನಿಸುವಷ್ಟೇ ದೂರದ್ದು, ಪರಿಚಿತವೆನಿಸುವಷ್ಟೇ ಗೂಢವಾದದ್ದು, ಕೈಗೆಟುಕುವಂತೆಯೇ ತೋರುತ್ತ ಅದರಳತೆಗೆ ನಿಲುಕಲಾರದ್ದು. ವಸ್ತು ಸತ್ಯವೆಂಬ ಮಾತು ಕೂಡ ಯಾವುದು? ಶಬ್ದಗಳೇ? ಅನುಭವಗಳೇ? ತಾತ್ತ್ವಿಕ ವಿಚಾರಗಳೇ? ಈ ಮೂರು ನೆಲೆಗಳಲ್ಲೂ ಕಾವ್ಯ ಆಸಕ್ತವಾಗಿರುತ್ತದೆ. 'ವಾಸ್ತವಿಕತೆ' ಪಡೆಯುವ ಅರ್ಥವಿಸ್ತಾರವನ್ನು ಅರಿವಿಗೆ ತಂದುಕೊಳ್ಳುತ್ತಲೇ ತಾತ್ತ್ವಿಕತೆ ಅದರತ್ತ ಕೈಚಾಚುತ್ತದೆ.

ಕಾವ್ಯಾನುಭವವನ್ನು ಅದರ ಸೌಂದರ್ಯಾತ್ಮಕ ಅಂಶಗಳ ವರ್ಧಿಸುವಂತೆಯೇ ಕಾವ್ಯದ ತಾತ್ತ್ವಿಕತೆ ಅದರ ಅರ್ಥವಂತಿಕೆಯನ್ನು ಬಲಗೊಳಿಸುತ್ತದೆ. ಕಾವ್ಯವನ್ನು ಸ್ಥಗಿತಾರ್ಥಗಳಿಂದ ಪಾರು ಮಾಡುವ ಕವಿಯ ಕರಣಗಳಲ್ಲಿ ತಾತ್ತ್ವಿಕತೆಯೂ ಒಂದು. ತತ್ತ್ವ ವಿಚಾರಗಳು

ಕಾವ್ಯ ಸೃಷ್ಟಿಯ ಮೊದಲೇ ಅಂಗೀಕೃತ ನಿಲುವುಗಳಾಗಿ ಕವಿಯ ಕೈ ಹಿಡಿಯುತ್ತಿದರೆ ಅವು ಕಾವ್ಯಾರ್ಥವನ್ನು ಬಲವಾಗಿ ನಿಯಂತ್ರಿಸಿಬಿಡುವುದು ನಿಜ. ಬದಲಾಗಿ ತಾತ್ತ್ವಿಕ ಪರಿಭಾವನೆಗಳು ಕವಿಯ ಸಂವೇದನೆಯ ಜಾಗೃತ ಅಂಶಗಳಾಗಿ ವಸ್ತುಶೋಧನೆಗೆ ತೊಡಗಿದಾಗ ಕಾವ್ಯಕೃತಿಯ ಅರ್ಥದ ಸೀಮೆಗಳು ವಿಸ್ತರಿಸುತ್ತವೆ. ಇಂಥ ಪೃಥಕರಣಕ್ಕೆ ತತ್ತ್ವಗಳನ್ನು ಒಳಪಡಿಸುವುದರಿಂದ ಕಾವ್ಯವು ಅರ್ಥ ಸಂಕೀರ್ಣತೆಯನ್ನು ಸಾಧಿಸುವುಷ್ಟೇ ಅಲ್ಲ, ಅರ್ಥದ ಗಡಿಗಳನ್ನು ಮೀರಿ ಬೆಳೆಯ ತೊಡಗುತ್ತದೆ. ಧ್ವನಿತಾರ್ಥದ ನೆಲೆಯಲ್ಲಿ ಕಾವ್ಯದ ಸೌಂದರ್ಯಾತ್ಮಕ ಮತ್ತು ವಿಚಾರಾತ್ಮಕ ಅಂಶಗಳು ಏಕತ್ರಗೊಳ್ಳುತ್ತವೆ. ಅಲ್ಲಿಯವರೆಗೂ ಕಾವ್ಯದ ಹೆಣಿಗೆಯಲ್ಲಿ ಗಳಿಗೆ-ಗಳಿಗೆಗೂ ಸಂಧಿಸುತ್ತಿದ್ದೂ ಸೂಕ್ಷ್ಮ ವಲಯದಲ್ಲಿ ಪ್ರತ್ಯೇಕತೆಯನ್ನು ಉಳಿಸಿಕೊಳ್ಳುತ್ತಿದ್ದ ಅಂಶಗಳವು.

ಕಾವ್ಯವನ್ನು ನಿರ್ದಿಷ್ಟ ಕಾಲ-ದೇಶಗಳ ಮಿತಿಯಿಂದ ಪಾರು ಮಾಡಿ ಅದಕ್ಕೆ ದೇಶ ಕಾಲಾತೀತ ಸ್ಥಿತಿಯನ್ನು ಒದಗಿಸುವುದು ತಾತ್ವಿಕತೆಯೇ. ಕಾವ್ಯಾರ್ಥವನ್ನು ದಟ್ಟಗೊಳಿಸಬಲ್ಲ, ಸಂಕುಚಿತ ನೆಲಗಳಿಂದ ಬಿಡುಗಡೆಗೊಳಿಸಬಲ್ಲ ಹಾಗೂ ಮನಸ್ಸನ್ನು ಮಹತ್ವದ ಅನುಭವದಲ್ಲಿ ಸಚರಿಸುವಂತೆ ಮಾಡಬಲ್ಲ ಧ್ವನಿಶಕ್ತಿಯನ್ನು ಪೊರೆಯುವ ಮುಖ್ಯ ಧಾತುಗಳಲ್ಲಿ ತಾತ್ತ್ವಿಕತೆಯೂ ಒಂದು. ಕಾವ್ಯದಲ್ಲಿ ನಿರ್ಮಿತವಾಗುವ ಸಂದರ್ಭಗಳು ನಿರ್ದಿಷ್ಟವಾಗಿದ್ದೂ ಅದರಿಂದ ಹೊಮ್ಮುವ ಅರ್ಥಗಳು ಅನಂತವಾಗಿರುತ್ತವೆ ಮತ್ತು ಸಾರ್ವಕಾಲಿಕ ಮಹತ್ವವನ್ನು ಪಡೆದಿರುತ್ತವೆ. ಒಂದು ಕಾವ್ಯ ಹೀಗೆ ತನ್ನ ದೇಶದ ಮತ್ತು ತನ್ನ ಕಾಲದ ಅವಧಿಗಳನ್ನು ದಾಟಿ ಎಷ್ಟೆಷ್ಟು ದೂರ ಹರಡಿ ಸಂಚರಿಸಿ ರಸಾನುಭವಕ್ಕೆ ತತ್ತ್ವಶೋಧನೆಗೆ ಕಾರಣವಾಗಬಲ್ಲದೋ ಅಷ್ಟು ಅದರ ಘನತೆ ದೊಡ್ಡದು, ಹಿರಿಮೆ ದೊಡ್ಡದು. ಕಾವ್ಯದ ಶ್ರೇಷ್ಠತೆಗೆ ಅದರಲ್ಲಿ ಜರುಗವ ವಿಶ್ವ ತತ್ತ್ವ ಪ್ರಕಾಶನದ ಪಾತ್ರ ತುಂಬ ಮಹತ್ವದ್ದು. ಹೀಗೆ ಕಾವ್ಯದ ಸಾರ್ವಕಾಲಿಕ ಪ್ರಸ್ತುತತೆಗೆ ಅಥವಾ ಕಲಾತೀತ ನೆಲೆಯ ಅಸ್ತಿತ್ವಕ್ಕೆ ನಿಲುಗಡೆಯೇ ಇಲ್ಲದ ಅದರ ತತ್ತ್ವಾರ್ಥ ಮುಖ್ಯ ಕಾರಣಗಲ್ಲಿ ಒಂದು. ಆ ತತ್ತ್ವದ ಅಂತಿಮ ಗುರಿ ಮನುಷ್ಯನ ಒಟ್ಟು ಸ್ವರೂಪ ಮತ್ತು ಅದೃಷ್ಟಗಳ ಬಗೆಗಿನ ಚಿಂತನೆ ಅವು ಕಾಲ, ದೇಶಗಳಿಂದ ಬದ್ಧವಾದುವಲ್ಲ.

**ಅಡಿಟಿಪ್ಪಣಿಗಳು**

೧. ಕಾವೇರಿ ಪಿ.ಸಾಗರ, **ದೂರದರ್ಶನ ಧಾರವಾಹಿಗಳಲ್ಲಿ ಮಹಿಳಾ ಪ್ರತಿನಿಧೀಕರಣ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೩೫

೨. ಕಲಾವತಿ ಬಿ.ಜಿ.(ಸಂ), **ಜಾಹಿರಾತುಗಳಲ್ಲಿ ಮಹಿಳಾ ಪ್ರತಿನಿಧೀಕರಣ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೨೧-೨೨

## ಅಧ್ಯಾಯ: ಮೂರು

# ಬಾಲನಾಗಮ್ಮ ಭಿನ್ನ ಪಠ್ಯಗಳ ಸಾಂಸ್ಕೃತಿಕ ಸಂಕಥನ

೩.೧. ಬಾಲನಾಗಮ್ಮ–ಸಂಪಾದಕ: ಡಾ.ಚಲುವರಾಜು

೩.೨. ಬಾಲನಾಗಮ್ಮ ಜಾನಪದ ಕಾವ್ಯ–ಸಂ.ಡಾ.ಮೈಸೂರು ಉಮೇಶ

೩.೩. ದಕ್ಷಿಣ ಕರ್ನಾಟಕದ ಜನಪದ ಕಾವ್ಯ ಪ್ರಕಾರಗಳು–ಡಾ.ಜೀ.ರಂ. ಪರಮಶಿವಯ್ಯ

೩.೪. ಜಾನಪದ ಖಂಡಕಾವ್ಯಗಳು–ಜೀ.ಶಂ.ಪರಮಶಿವಯ್ಯ

ಅಧ್ಯಾಯ: ಮೂರು

# ಬಾಲನಾಗಮ್ಮ ಭಿನ್ನ ಪಠ್ಯಗಳ ಸಾಂಸ್ಕೃತಿಕ ಸಂಕಥನ

ಬಾಲನಾಗಮ್ಮ ಈ ಕಾವ್ಯವು ಕರ್ನಾಟಕ ಹಾಗೂ ಆಂಧ್ರ ಪ್ರದೇಶದಲ್ಲೂ ಸಾಕಷ್ಟು ಪ್ರಸಿದ್ಧಿಯಾಗಿದೆ. ಈ ಕಾವ್ಯ ವೃತ್ತಿ ಗಾಯಕರಲ್ಲಿ ದೊಡ್ಡ ಕಾವ್ಯವಾಗಿ ರೂಪುಗೊಂಡಿದ್ದರೆ ಸಾಮಾನ್ಯ ಗಾಯಕರಲ್ಲಿ ಕಿರು ಕಾವ್ಯವಾಗಿ ಉಳಿದಿದೆ. ಅನೇಕ ಸಂಗ್ರಹಕಾರರು ಈ ಕಾವ್ಯ ಸಂಗ್ರಹಿಸಿದ್ದಾರೆ. ಕಥಾಂಶವೆಲ್ಲ ಒಂದೇ ಆಗಿದ್ದು, ಕಥೆಯ ಪ್ರಾರಂಭ ಹಾಗೂ ಬೆಳವಣಿಗೆಯಲ್ಲಿ ಅಲ್ಪಸ್ವಲ್ಪ ವ್ಯತ್ಯಾಸವನ್ನು ಕಾಣಬಹುದಾಗಿದೆ.

ಬಾಲನಾಗಮ್ಮ ನಾಗೇಂದ್ರನ ವರಪ್ರಸಾದದಿಂದ ಹುಟ್ಟುವುದು. ಬಾಲನಾಗಮ್ಮನ ಮಗ ನಾಗೇಂದ್ರನ ವರಪ್ರಸಾದದಿಂದ ಹುಟ್ಟುವುದು. ಮುಂದೆ ಮಾಯದ ಫಕೀರ ಮಾಯದ ಮಂತ್ರದಿಂದ ಮಾಯದ ಕಪ್ಪು ಸವರಿ ಬಾಲನಾಗಮ್ಮನನ್ನು ನಾಯಿಯನ್ನಾಗಿ ಮಾಡಿಕೊಂಡು ಹೋಗುವುದು ಈ ಕಾವ್ಯದಲ್ಲಿ ಕಂಡುಬರುತ್ತದೆ. ಬಾಲನಾಗಮ್ಮನ ಮಗ ಬಾಲವದ್ದರಾಜನಿಗೆ ಸಮುದ್ರ ಭಾಗವಾಗಿ ದಾರಿ ತೋರುವುದು. ಆಲದ ಮರದ ಭಾಗವಾಗಿ ಕರಬಾನದಲ್ಲಿರುವ ಗಿಣಿಯನ್ನು ಕೊಡುವುದು ಅಂತಹ ಗಿಣಿಯಲಿ ಮಾಯದ ಫಕೀರನ ಜೀವ ಅಡಗಿರುವುದು ಒಂದು ಅದ್ಭುತವಾಗಿದೆ. ನಾಗರಗನ್ನೆ ಅಗ್ನಿದಿವ್ಯೆಯಾದಾಗ ಅವಳನ್ನು ಅಗ್ನಿ ಸುಡದಿರುವುದು ಮತ್ತೊಂದು ಪವಾಡವೇ ಸರಿ. ಕಲ್ಲಾಗಿದ್ದ ಅವನ ತಂದೆ, ದೊಡ್ಡ ಅಪ್ಪಂದಿರನ್ನು ಬಾಲವದ್ದರಾಜ ಬದುಕಿಸುವುದು ಹೀಗೆ ಹತ್ತಾರು ಅತಿಮಾನುಷ ಘಟನೆಗಳು ಬಾಲನಾಗಮ್ಮನ ಕಾವ್ಯದಲ್ಲಿ ಗುರುತಿಸಬಹುದು.

ಬಾಲನಾಗಮ್ಮನ ಕಾವ್ಯದಲ್ಲಿ ಭಿನ್ನ ಪಠ್ಯಗಳ ಸಾಂಸ್ಕೃತಿಕ ಸಂಕಥನವನ್ನು ನೋಡುತ್ತಾ ಹೋದರೆ ಹಲವಾರು ಕುತೂಹಲಕರ ಸಂಗತಿಗಳನ್ನು ಕಾಣಬಹುದು. ಈ ಕಾವ್ಯದಲ್ಲಿ ಬರುವಂಥ ಸ್ಥಳಗಳಾಗಿರಬಹುದು, ಅಲ್ಲಿ ಬರುವಂತ ಪಾತ್ರಗಳ ಹೆಸರನ್ನು ಮತ್ತು ಪ್ರಾಣಿ, ಪಕ್ಷಿ, ಪರಿಸರವನ್ನು ಪ್ರತಿಯೊಂದನ್ನು ಗಮನಿಸಿದಂತೆ ಅಲ್ಲಿ ಅನೇಕ ಬಗೆಯಾಗಿ

ಕಾಣಬಹುದು. ಅವುಗಳನ್ನು ಈ ರೀತಿಯಾಗಿ ಕಾಣುವುದಾದರೆ ಬಾಲನಾಗಮ್ಮನ ಕಾವ್ಯದಲ್ಲಿ ಉತ್ತರ ಕಡೆ ಮಂಡಲಗಿರಿ ಪಟ್ಟಣ ಮತ್ತೊಂದು ಪಠ್ಯದಲ್ಲಿ ಭೂಚಕ್ರ ಪಟ್ಟಣ ಅಂತ ಹೆಸರಿಸಿದ್ದಾರೆ. ಆ ಪಟ್ಟಣವನ್ನು ಆಳುವಂಥ ರಾಜರು ನವಭೋಜರಾಜ ಮತ್ತು ಅವರ ಅಣ್ಣ ಶ್ರೀಗಂಧವರಾಜ ಒಂದು ಪಠ್ಯದಲ್ಲಿ ಮಾತ್ರ ಅಣ್ಣ ಮತ್ತು ತಮ್ಮರನ್ನು ಹೆಸರಿಸಿದ್ದಾರೆ. ಆದರೆ ಇನ್ನುಳಿದ ಪಠ್ಯದಲ್ಲಿ ಈ ರೀತಿಯಾಗಿ ಹೆಸರಿಸಿಲ್ಲ. ಹೀಗೆ ಕಾವ್ಯದಲ್ಲಿ ನೋಡುತ್ತಾ ಹೋದಂತೆ ಒಂದು ದಿನ ಯುಗಾದಿ ಹಬ್ಬದ ಪಾಡ್ಯ ಆ ರಾಜರ ಪರಂಪರೆಯ ಪದ್ಧತಿಯಂತೆ ಬೇಟೆ ಆಚರಣೆಗೆ ಹೊರಡುತ್ತಾನೆ. ವರ್ಷಕ್ಕೆ ಒಮ್ಮೆ ಯುಗಾದಿ ಹಬ್ಬದ ದಿನ ರಾಜ ತನ್ನ ಸೈನ್ಯ ಜೊತೆಗೂಡಿ ಕಾಡಿಗೆ ಬೇಟೆಗೆ ಹೋಗುತ್ತಾರೆ. ಅಂದು ತಮಗೆ ದೊರಕುವ ಬೇಟೆಯ ಯಾವುದೇ ಪ್ರಾಣಿಗಳನ್ನು ಕೊಲ್ಲುವಂತಿಲ್ಲ. ಆ ಪ್ರಾಣಿಗಳನ್ನು ಅವಕ್ಕೆ ಯಾವುದೇ ರೀತಿಯ ಜೀವಕ್ಕೆ ಅಪಾಯವಿಲ್ಲದಂತೆ ಹಿಡಿದು ತಂದು ಪೂಜೆ ಮಾಡಿ ಊರಿನ ಅಗಸಿ ಬಾಗಿಲಿನ ಮುಂದೆ ಮತ್ತೆ ಕಾಡಿಗೆ ಹೋಗುವಂತೆ ಬಿಡುವ ಆಚರಣೆ ಅದಾಗಿರುತ್ತದೆ. ಅಂದರೆ ಈ ಕಾವ್ಯ ಭಾಗವನ್ನು ಗಮನಿಸುತ್ತಾ ಹೋದರೆ ಹಾಡುಗಾರ್ತಿ ದರೋಜಿ ಈರಮ್ಮ ಬೇಟೆ ಆಡುವುದು ಆಧುನಿಕ ಸಂದರ್ಭದಲ್ಲಿ ಅಪರಾಧ ಎನ್ನುವುದನ್ನು ಅರಿತುಕೊಂಡು ಈ ಕಾವ್ಯ ಭಾಗವನ್ನು ಅವರು ಮಹತ್ವಪೂರ್ಣವಾಗಿ ಪ್ರಾಣಿಗಳನ್ನು ಮತ್ತೆ ಕಾಡಿಗೆ ಬಿಡುತ್ತಾರೆ ಎಂದು ಹಾಡಿದ್ದಾರೆ. ಯಾಕೆಂದರೆ ಪ್ರಾಣಿಗಳನ್ನು ಕೊಲ್ಲುವುದು ಕಾನೂನಿನ ಪ್ರಕಾರ ಅಪರಾಧ ಈ ರೀತಿಯಾಗಿ ಕಾವ್ಯವನ್ನು ಸೃಷ್ಟಿಸಿಕೊಂಡಿದ್ದಾರೆ. ಅಂದರೆ ಈ ಕಾವ್ಯದಲ್ಲಿ ಪ್ರಾಣಿಯನ್ನು ಕೊಲ್ಲುವಂತಹ ಪ್ರಸಂಗ ಬಂದರೆ ಅರಣ್ಯ ಇಲಾಖೆಯವರು ಎಲ್ಲಿ ನಮ್ಮನ್ನು ಕೇಳುತ್ತಾರೆ. ಅಂದರೆ ಅವರು ಅಲೆಮಾರಿಗಳಾಗಿರುವುದರಿಂದ ಈ ಕಾವ್ಯವನ್ನು ಅವರು ಈ ರೀತಿಯಾಗಿ ಹಾಡಿರಬಹುದಾದ ಸಂಗತಿ ಇರಬಹುದು ಎಂದು ತಿಳಿಯಬಹುದಾಗಿದೆ. ಆಧುನಿಕ ಸಂದರ್ಭದಲ್ಲಿ ಪ್ರಾಣಿಗಳನ್ನು ಬೇಟೆಯಾಡುವುದು ಅಪರಾಧವಾಗಿದೆ. ಆದ್ದರಿಂದ ನಾವು ಪ್ರಾಣಿಗಳನ್ನು ಬೇಟೆಮಾಡಿ ಅವರು ಅವುಗಳನ್ನು ಕೊಲ್ಲುತ್ತಿದ್ದರು ಎಂಬ ಕಾವ್ಯಭಾಗವನ್ನು ಈರಮ್ಮ ಈ ಕಾವ್ಯಭಾಗವನ್ನು ಈ ರೀತಿಯಾಗಿ ಸೃಷ್ಟಿಸಿಕೊಂಡು ಹಾಡಿರಬಹುದು ಎಂದು ಈ ಕಾವ್ಯ ಭಾಗದ ಮೂಲಕ ತಿಳಿಯಬಹುದಾಗಿದೆ ಎಂದು ಹೇಳಬಹುದು.

ಬಾಲನಾಗಮ್ಮನ ಕಾವ್ಯದಲ್ಲಿ ಹೆಣ್ಣನ್ನು ಯಾಕೆ ಪ್ರತಿನಿಧಿಸುತ್ತಾ ಹೋಗಿದ್ದಾರೆ ಎಂಬುದನ್ನು ಗಮನಿಸುತ್ತಾ ಹೋದರೆ ಹಿಂದಿನ ಕಾಲದಲ್ಲಿ ಅದಿಮ ಸಮಾಜ ಅಲೆಮಾರಿ ಸಮಾಜಗಳಲ್ಲಿ ಮಾತೃ ಪ್ರಧಾನವಾದಂತಹ ಸಮಾಜವಿತ್ತು ಎಂದು ತಿಳಿದುಬರುತ್ತದೆ. ಮಾತೃ ಪ್ರಧಾನ ಕುಟುಂಬದಿಂದ ಪಿತೃಪ್ರಧಾನ ಕುಟುಂಬಕ್ಕೆ ಬದಲಾಗಿರುವಂತಹದ್ದನ್ನು ಕಾಣಬಹುದು.

ಪುರುಷ ಪ್ರಧಾನ ಸಮಾಜವು ಸ್ತ್ರೀಯರನ್ನು ಎರಡನೇ ದರ್ಜೆಯ ಪ್ರಜೆಯನ್ನಾಗಿ ನೋಡುವಂತಹದ್ದು ಮತ್ತು ಸ್ತ್ರೀಯರಿಗೆ ಯಾವುದೇ ರೀತಿಯಾದಂತಹ ಅವಕಾಶಗಳನ್ನು ಕೊಡದೇ ಇರುವಂತಹ ಅಂದರೆ ಅವರಿಗೆ ಆಗಿನ ಕಾಲದಲ್ಲಿ ಮಹಿಳೆ ನಾಲ್ಕು ಗೋಡೆಗಳ ಮಧ್ಯೆ ಇರಬೇಕು ಎಂಬುದನ್ನು ತಿಳಿಸಿದರು. ಅಂದರೆ ಮುಂಚೆ ಮಾತೃ ಪ್ರಧಾನ ಸಮಾಜಗಳಲ್ಲಿ ಅಲೆಮಾರಿಗಳಾಗಿದ್ದರು. ಬರುಬರುತ್ತಾ ಅವರು ಒಂದು ಕಡೆ ನೆಲೆಯೂರಿ ಕೃಷಿ ಮಾಡಲು ಪ್ರಾರಂಭಿಸಿದರು. ಪುರುಷರು ಸ್ತ್ರೀಯರಿಗಿಂತ ಬಲಿಷ್ಠರಾಗಿದ್ದರಿಂದ ಅವರು ಎಲ್ಲಾ ಕಾರ್ಯಗಳನ್ನು ಮಾಡುತ್ತಾ ಸ್ತ್ರೀಯರನ್ನು ಹತ್ತಿಕ್ಕಲು ಅಂದರೆ ಅವರಿಗೆ ಮನೆಕೆಲಸ ಶ್ರೇಷ್ಠ. ಹೊರಗಡೆ ಹೋಗಲು ಬಿಡದೇ ಅವರನ್ನು ಅವರು ಎರಡನೇ ದರ್ಜೆಯ ಪ್ರಜೆಯನ್ನಾಗಿ ಕಾಣಲು ಪ್ರಾರಂಭಿಸಿದರು. ಅಂದಿನಿಂದ ಸಮಾಜದಲ್ಲಿ ಮಹಿಳೆಯರಿಗೆ ಯಾವುದೇ ರೀತಿಯ ಅವಕಾಶಗಳನ್ನು ನೀಡಲಿಲ್ಲ. ಆದರೆ ಆಧುನಿಕ ಸಂದರ್ಭದಲ್ಲಿ ಮಹಿಳೆಯರಿಗೆ ಎಲ್ಲಾ ರೀತಿಯ ಅವಕಾಶಗಳನ್ನು ಕಲ್ಪಿಸಿದ್ದಾರೆ. ಆದರೆ ಅವರನ್ನು ಕಾಣುವುದು ಸಮಾಜದಲ್ಲಿ ಎರಡನೇ ದರ್ಜೆಯ ಪ್ರಜೆಯಾಗಿ ಎಂಬುದನ್ನು ತಿಳಿಯಬಹುದಾಗಿದೆ. ಇದನ್ನರಿತ ಜನಪದರು ತಮ್ಮ ಕಾವ್ಯಗಳಲ್ಲಿ ಬದಲಾವಣೆ ಮಾಡಿದ್ದಾರೆ. ಈ ರೀತಿಯಾಗಿ ಹೆಣ್ಣನ್ನು ಹತ್ತಿಕ್ಕುವುದನ್ನು ಪ್ರಜ್ಞಾಪೂರ್ವಕವಾಗಿ ಕಂಡರೂ ಅದನ್ನ ಅಪ್ರಜ್ಞಾಪೂರ್ವಕವಾಗಿ ಕಾವ್ಯದಲ್ಲಿ ಅಭಿವ್ಯಕ್ತಿಗೊಳಿಸಿದರು.

ಈ ಕಾವ್ಯದಲ್ಲಿ ಭೂಲಕ್ಷ್ಮಿದೇವಿಗೆ ಮಕ್ಕಳಾಗದೆ ಹೋದ ಸಂದರ್ಭದಲ್ಲಿ ಆಕೆ ತಪಸ್ಸು ಮಾಡಿ ನಾಗೇಂದ್ರನ ವರಪ್ರಸಾದದಿಂದ ಮಕ್ಕಳನ್ನು ಪಡೆಯುವಂತಹದ್ದು. ಅಂದರೆ ಅಲ್ಲಿ ಬರುವಂತಹ ಪ್ರಸಂಗವನ್ನು ಭಿನ್ನ ಪಠ್ಯದಲ್ಲಿ ಭಿನ್ನ ರೀತಿಯಾಗಿ ಗುರುತಿಸಿದ್ದಾರೆ. ಅಂದರೆ ಹಣ್ಣಿನ ಮೂಲಕ ದೇವರು ಮಕ್ಕಳ ಫಲವನ್ನು ನೀಡುವಂತಹದ್ದು, ಅದನ್ನು ಸ್ವೀಕರಿಸಿದ ಸ್ತ್ರೀ ಮಕ್ಕಳನ್ನು ಪಡೆಯುವಂತಹದ್ದು. ಪಠ್ಯಗಳಲ್ಲಿ ಒಂದೊಂದು ತರಹದ ಹಣ್ಣನ್ನು ನೀಡುವುದು ಒಂದು ಪಠ್ಯದಲ್ಲಿ ಕಜ್ಜೂರದ ಹಣ್ಣು ಎಂದು ಹೆಸರಿಸಿದರೆ ಮತ್ತೊಂದು ಪಠ್ಯದಲ್ಲಿ ಮಾವಿನ ಹಣ್ಣು ಎಂದು ಹೆಸರಿಸಿದ್ದಾರೆ. ದೇವರು ಫಲ ಕೊಟ್ಟು ಮತ್ತೆ ಅದನ್ನ ಪಡೆಯುವಂತಹದ್ದನ್ನು ಈ ಕಾವ್ಯದಲ್ಲಿ ಕಾಣುವಂತಹದ್ದು. ಅಂದರೆ ಈ ಕಾವ್ಯ ಭಾಗದಲ್ಲಿ ಶಿವನು ದಾಸಪ್ಪನ ವೇಷಧರಿಸಿ ಮತ್ತೊಂದರಲ್ಲಿ ಸಣ್ಣ ಮಗುವಿನ ವೇಷ ಧರಿಸಿ, ಸ್ತ್ರೀಗೆ ಮಕ್ಕಳ ಫಲವನ್ನು ನೀಡಿ ಅದರಲ್ಲಿ ಮತ್ತೆ ಕೆಲವು ದಿನಗಳ ನಂತರ ಒಂದು ಮಗುವನ್ನು ಪಡೆಯಲು ಬರುವಂತಹದ್ದು ಕಾಣಬಹುದು. ಈ ಕಾವ್ಯದಲ್ಲಿ ಬರುವ ಸ್ತ್ರೀ ಭೂಲಕ್ಷ್ಮಿದೇವಿ ಮಕ್ಕಳನ್ನು ಪಡೆದ ಕೆಲವು ದಿನಗಳ ನಂತರ ನಾಗೇಂದ್ರ ಮಕ್ಕಳನ್ನು ಕೇಳಲು ಬರುತ್ತಾನೆ.

ಆಗ ಆ ತಾಯಿ ಮಕ್ಕಳನ್ನು ಕೊಡುವುದಿಲ್ಲ ತಾನೇ ತನ್ನ ಪ್ರಾಣವನ್ನು ಅರ್ಪಿಸುವಂತಹದ್ದು ಕಾಣಬಹುದು. ಆಕೆ ತನ್ನ ಪ್ರಾಣವನ್ನು ಬಿಡುವಾಗ ತನ್ನ ಪತಿಯಾದ ನವಭೋಜರಾಜನಿಗೆ ಮತ್ತೆ ಮರುಮದುವೆ ಆಗಬೇಡ ಎಂದಿರುತ್ತಾಳೆ. ಆದರೆ ಆ ಮಾತನನು ಮೀರಿ ಆಕೆಯ ಪತಿ ಮತ್ತೆ ಮರುಮದುವೆ ಮಾಡಿಕೊಳ್ಳುತ್ತಾನೆ. ಅಂದರೆ ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಪುರುಷರು ತಮಗೆ ಎಷ್ಟೋ ಜನ ಪತ್ನಿಯರನ್ನು ಹೊಂದಬಹುದು. ಆದರೆ ಸ್ತ್ರೀಯರಿಗೆ ಆ ಅವಕಾಶವಿಲ್ಲ. ಅಂದರೆ ಸ್ತ್ರೀಯರು ತಮ್ಮ ಪತಿಯನ್ನು ಕಳೆದುಕೊಂಡರೆ ಮತ್ತೆ ಅವರಿಗೆ ಮರುಮದುವೆಯಾಗಲು ಅವಕಾಶವಿಲ್ಲ. ಆದರೆ ಪುರುಷರು ಮಾತ್ರ ಮರು ಮದುವೆಯಾಗಬಹುದು. ಹಿಂದಿನ ಕಾಲದಲ್ಲಿ ಸ್ತ್ರೀಯರು ತಮ್ಮ ಪತಿಯರು ಮರಣ ಹೊಂದಿದರೆ ಅವರು ಅವರ ಚಿತೆಯಲ್ಲಿಯೇ ಹಾರಿ ಪ್ರಾಣವನ್ನು ಬಿಡುವಂತಹ ಸಂದರ್ಭ ಆಗಿನ ಕಾಲದಲ್ಲಿ ಇತ್ತು. ಅಂದರೆ ಸತಿ ಸಹಗಮನ ಪದ್ಧತಿ ಇತ್ತು. ಈ ರೀತಿಯಾಗಿ ಸ್ತ್ರೀಯನ್ನು ಕಾಣುವಂಥಹದ್ದು ನಾವು ಪುರುಷ ಪ್ರಧಾನ ಸಮಾಜದಲ್ಲಿ ಕಾಣಬಹುದಾಗಿದೆ.

ನವಭೋಜರಾಜ ಎರಡನೆಯ ಮದುವೆಯಾಗುತ್ತಾನೆ. ಆಗ ಬರುವಂತಹ ಸ್ತ್ರೀ (ಮಾಣಿಕ್ಯದೇವಿ)ಯು ಸ್ತ್ರೀ ಎಂದರೆ ಮೊದಲನೆ ಪತ್ನಿ ಮಕ್ಕಳನ್ನು ಶೋಷಣೆ ಮಾಡುತ್ತಾಳೆ. ಪುರುಷ ಪ್ರಧಾನ ವ್ಯವಸ್ಥೆ ಆಕೆಯನ್ನು ಈ ರೀತಿಯಾಗಿ ಗುರುತಿಸಿದೆ ಎಂದು ಹೇಳಬಹುದು. ಹೆಣ್ಣಿನಿಂದಲೇ ಹೆಣ್ಣಿನ ಶೋಷಣೆಯನ್ನು ಪುರುಷ ಪ್ರಧಾನವಾದ ವ್ಯವಸ್ಥೆ ಕಲ್ಪಿಸಿದೆ ಎನ್ನಲಾಗಿದೆ. ಈ ಬಾಲನಾಗಮ್ಮನ ಕಾವ್ಯದಲ್ಲಿ ಹಲವಾರು ಅತಿಮಾನುಷ ಘಟನೆಗಳನ್ನು ನಾವು ಕಾಣಬಹುದು. ಅವುಗಳಲ್ಲಿ ಈಶ್ವರ ಕೊಟ್ಟ ಶಾಪದಂತೆ ಶ್ರೀಗಂಧರಾಜ ಮನೆಗೆ ಬಂದಾಗ ಮನುಷ್ಯನಾಗುವುದು ಮತ್ತು ಅರಣ್ಯಕ್ಕೆ ಹೋದಾಗ ಹುಲಿಯಾಗುವಂತಹದ್ದನ್ನು ಗಮನಿಸಬಹುದು. ಯಾಕೆ ಈ ರೀತಿಯಾಗಿ ಗುರುತಿಸಿರಬಹುದು. ಆಗಿನ ಕಾಲದಲ್ಲಿ ಹುಲಿಗಳೇನಾದರು ಮಾನವರಿಗೆ ಹತ್ತಿರದ ಸಂಬಂಧವೇನಾದರೂ ಇತ್ತಾ ಎನ್ನಬಹುದು. ಮತ್ತೊಂದು ಸನ್ನಿವೇಶ ಗಮನಿಸುವುದಾದರೆ ನವಭೋಜರಾಜ ಮಕ್ಕಳನ್ನು ಅರಣದಲ್ಲಿ ಬಿಟ್ಟು ಹೋದಾಗ ಅಲ್ಲಿ ಮಕ್ಕಳಿಗೆ ಆಡುಮರಿ(ಮೇಕೆ)ಯಾಗಿ ಬಂದು ಭೂಲಕ್ಷ್ಮಿದೇವಿ ಮಕ್ಕಳಿಗೆ ಹಾಲನ್ನು ಕೊಡುವಂತ ಸನ್ನಿವೇಶ ಇದು ಸಾಧ್ಯನಾ ಈ ರೀತಿ ಮರಣ ಹೊಂದಿವರು ಮತ್ತೆ ಬೇರೆ ವೇಷ ಧರಿಸಿ ಬರುವುದುಂಟಾ? ಅದೇ ರೀತಿ ಪ್ರಾಣಿಗಳ ಮಾತುಗಾರಿಕೆಯನ್ನು ಇಲ್ಲಿ ಕಾಣಬಹುದು. ಅವುಗಳಿಂದ ಮನುಷ್ಯ ಔಷದಿ ದೊರಕುವಂತಹದು ಈ ಕಾವ್ಯದಲ್ಲಿ ಕಾಣಬಹುದು. ಅಂದರೆ ಮರಣ ಹೊಂದಿವರನ್ನು ಮತ್ತೆ ಬದುಕಿಸುವಂಥ ಔಷಧಿ ಈ ಪ್ರಪಂಚದಲ್ಲಿದೆ ಎಂದು ಪ್ರಾಣಿಗಳಿಂದ ಗೊತ್ತಾಗುತ್ತದೆ. ಉದಾಹರಣೆಗೆ ವಿಷ ಜಂತು ಹಾವು

ಅದರೊಡನೆ ಸೆಣಸಿ ಅದನ್ನು ಕೊಂದ ಮುಂಗುಸಿ ವಿಷ ಪ್ರಾಸದಿಂದ ಪಾರಾಗಲು ಸೇವಿಸುವ ಸಸ್ಯ, ಗೆಡ್ಡೆ, ಬೇರುಗಳನ್ನು ಗುರುತಿಸುವ ಮಾನವ ತಾನು ಹಾವಿನ ವಿಷದಿಂದ ಪಾರಾಗಲು ಅದೇ ಸಸ್ಯವನ್ನು ಔಷಧವನ್ನಾಗಿ ಬಳಸುವುದನ್ನು ಕಂಡುಕೊಂಡಿದ್ದು ಇಂತಹ ಪ್ರಾಣಿ ಜಗತ್ತಿನಿಂದ ಎಂಬುದನ್ನು ಕಾಣಬಹುದು.

ಇಂದು ಮಾನವ ಪ್ರಾಣಿ ಜಗತ್ತನ್ನು ಕ್ರೂರಿಯಾಗಿ ಕಂಡುರೂ ಪ್ರಾಣಿ ಜಗತ್ತು ಮತ್ತು ಮಾನವನ ಜಗತ್ತನ್ನ ಎಂದು ಕ್ರೂರವಾಗಿ ಕಾಣುವುದಿಲ್ಲ ಎಂಬುದಕ್ಕೆ ಸಮರ್ಥನೀಯವಾದ ಉತ್ತರವಿದೆ. ಕುಸುಮರಾಜನ ಮಗಳಿಗೆ ಬಂದಿರುವ ಕಷ್ಟವನ್ನು ಪರಿಹರಿಸಲು ಹುಲಿ, ಕರಡಿ, ಕಪ್ಪಲನರಿ, ನಾಗರ ಹಾವುಗಳು ತೀರ್ಮಾನಿಸಿ ಈ ಔಷಧಿಯನ್ನು ತೆಗೆದುಕೊಂಡು ಹೋಗಿ ಕೊಟ್ಟು ರಾಜನ ಮಗಳು ಕುಸುಮಗಂಧಿಯನ್ನು ಬದುಕಿಸುವ ನಿರ್ಧಾರ ಮಾಡುತ್ತವೆ. ಇದೂ ಸಹ ಕಾವ್ಯವೊಂದರ ವಿಶೇಷ ಗುಣವಾಗಿದೆ.

ಈ ಕಾವ್ಯದಲ್ಲಿ ಬೇರುಂಡ ಪಕ್ಷಿಗಳು ಮನುಷ್ಯನನ್ನು ಅಂದರೆ ಬಾಲವದ್ದರಾಜನನ್ನು ರೆಕ್ಕೆ ಮೇಲೆ ಕುಡಿಸಿಕೊಂಡು ಸಮುದ್ರವನ್ನು ದಾಟಿ ಮಾಯದ ಫಕೀರನ ಜೀವವನ್ನು ತರುವಂತಹದ್ದು ಅಂದರೆ ಪಕ್ಷಿಗಳು ಮಾನವನನ್ನು ಎತ್ತುಕೊಂಡು ಹೋಗಲು ಸಾಧ್ಯವಿಲ್ಲ. ಆದರೆ ಈ ಕಾವ್ಯದಲ್ಲಿ ಅದನ್ನು ಸಾಧ್ಯ ಮಾಡಿದ್ದಾರೆ. ಇಂತಹ ಹತ್ತು ಹಲವಾರು ಅತಿಮಾನುಷ ಘಟನೆಗಳು ಈ ಕಾವ್ಯದಲ್ಲಿ ಬರುತ್ತವೆ. ಈ ಕಾವ್ಯದಲ್ಲಿ ಪಾನಗಲ್ಲ ಪಟ್ಟಣದ ದೇವಗಿರಿ ರಾಜರಿಗೂ ಮತ್ತು ದಂಡಿಕೋಟೆ ರಾಜರಿಗೂ ಯುದ್ಧ ನಡೆದಿರುತ್ತದೆ. ಅದನ್ನ ಅವರು ದ್ವೇಷದಿಂದ ಮತ್ತೆ ಅವರ ಮೊಮ್ಮಕ್ಕಳು ಯುದ್ಧಕ್ಕೆ ಅಣಿಯಾಗುವಂತಹದ್ದನ್ನು ಕಾಣಬಹುದು. ಇದರ ಮೂಲಕ ತಿಳಿದು ಬರುವುದೇನೆಂದರೆ, ಆಗಿನ ಕಾಲ ಘಟ್ಟದಲ್ಲಿ ಭಾರತದಲ್ಲಿ ಆಗಿ ಹೋಗಿರುವಂತಹ ಯುದ್ಧಗಳ ಸಂದರ್ಭವನ್ನಿಟ್ಟುಕೊಂಡು ಹಾಡುಗಾರರು ಈ ಕಾವ್ಯವನ್ನು ಸೃಷ್ಟಿ ಮಾಡಿರಬಹುದು ಎಂಬುದನ್ನು ತಿಳಿಯಬಹುದಾಗಿದೆ. ಅಂದರೆ ಆ ಕಾಲದ ಸಂದರ್ಭದಲ್ಲಿ ಆಗಿ ಹೋಗಿರುವ ಯುದ್ಧಗಳನ್ನು ಈ ಕಾವ್ಯದಲ್ಲಿ ಕಂಡುಬರುಂತಹದ್ದು.

ಈ ಬಾಲನಾಗಮ್ಮನ ಕಾವ್ಯದಲ್ಲಿ ಮಾಯದ ಫಕೀರ ಬಂದು ಬಾಲನಾಗಮ್ಮನನ್ನು ನಾಯಿಯನ್ನಾಗಿ ಮಾಡಿಕೊಂಡು ಸೆರೆ ಹೊಯ್ಯುವಂತಹದ್ದು. ಯಾಕೆ ಹೀಗೆ ಈ ಕಾವ್ಯದಲ್ಲಿ ಕೊಟ್ಟಿದ್ದಾರೆ ಎಂದರೆ ಆಗಿನ ಕಾಲದ ಸಂದರ್ಭದಲ್ಲಿ ಹಿಂದೂ-ಮುಸ್ಲಿಂರಿಗೂ ನಡೆದಿರುವಂತಹ ಯುದ್ಧಗಳನ್ನು ಕಾಣಬಹುದು. ಹಾಗಾಗಿ ಈ ಕಾವ್ಯದಲ್ಲಿ ನಾಗಮ್ಮನನ್ನು ಅಪಹರಿಸುವುದು ಆಕೆಗೆ ಸಂಬಂಧಿಸಿದ ವಂಶಜರಿಂದ ಯುದ್ಧ ಮಾಡುವಂತಹದ್ದನ್ನ ಕಾಣಬಹುದು. ಹೀಗೆ

ಸ್ತ್ರೀಯನ್ನು ಮುಂದಿಟ್ಟುಕೊಂಡು ಸ್ತ್ರೀಯರೇ ಯುದ್ಧ ಕಾರಣರಾದರು ಎಂಬುದನ್ನು ತಿಳಿಸುವಂತ ಪ್ರಯತ್ನ ಪುರುಷ ಸಮಾಜ ಮಾಡುತ್ತದೆ.

ಭಾರತೀಯ ಸಂದರ್ಭದಲ್ಲಿ ಮುಸ್ಲಿಮೇತರ ಹಿಂದೂಗಳು ದರ್ಗಾಗಳಿಗೆ, ಮೊಹರಂನ ಸಂದರ್ಭಗಳಲ್ಲಿ ಮಸೀದಿಗಳಿಗೆ ನಡೆದುಕೊಳ್ಳುವಂತಹ ಸಂಪ್ರದಾಯವಿದೆ. ವಿಶೇಷವಾಗಿ ದರ್ಗಾಗಳಲ್ಲಿ ದೆವ್ವ ಹಿಡಿದವರ ದೆವ್ವ ಬಿಡಿಸುವ ಪದ್ಧತಿಯನ್ನು ನಾವು ಎಲ್ಲೆಡೆಗೂ ನೋಡಬಹುದಾಗಿದೆ. ಬೇರೆಲ್ಲಾ ನಮ್ಮ ಪರಂಪರೆಯ ದೆವ್ವಗಳಿಗೆ ಸಾಧ್ಯವಾಗದ್ದು ಮುಸ್ಲಿಂ ಪರಂಪರೆಯ ಪೌರೋಹಿತ್ಯಕ್ಕೆ ಇದು ಹೇಗೆ ಸಾಧ್ಯವಾಯಿತು? ಎಂಬ ಪ್ರಶ್ನೆ ಕಾಡುತ್ತದೆ. ಹಾಗೆಯೇ ಬಾಲನಾಗಮ್ಮ ಕಥನ ಕಾವ್ಯದಲ್ಲಿ ಮಾಯದ ಫಕೀರನು ಲಕ್ಷಾಂತರ ದೆವ್ವಗಳನ್ನು ತನ್ನ ಸೆರೆಯಲ್ಲಿಟ್ಟುಕೊಂಡಿದ್ದ ಸಂಗತಿಯೂ ಸಹ ಕುತೂಹಲಕಾರಿಯಾಗಿದೆ. ಇದು ಮುಸ್ಲಿಂ ಮತ್ತು ಹಿಂದೂ ಸಂಸ್ಕೃತಿಗಳೆರಡರ ನಡುವಿನ ಸಂಸ್ಕೃತೀಕರಣ ಪ್ರಕ್ರಿಯೆಯನ್ನು ಸೂಚಿಸುತ್ತದೆ. ಈ ಕಾವ್ಯದಲ್ಲಿ ಮಾಯದ ಫಕೀರನ ಸೆರೆಯಲ್ಲಿ ಅಷ್ಟೊಂದು ದೆವ್ವಗಳ ಸೆರೆ ಇರುತ್ತವೆ. ಅದಕ್ಕಾಗಿಯೇ ಬಾಲವದ್ದರಾಜ ಮಾಯದ ಫಕೀರನ ಕೊಂದು ಅಲ್ಲಿಯೇ ಆತನಿಗೆ ದರ್ಗಾವನ್ನು ಕಟ್ಟಿಸಿ ಅದಕ್ಕೆ ಪೂಜೆ ಮಾಡಲು ಪೂಜಾರಿಗಳನ್ನು ನೇಮಕ ಮಾಡುವಂತಹದ್ದು. ಅಂದರೆ ಇಲ್ಲಿ ಗಮನಿಸುವ ಅಂಶವೆಂದರೆ ಅಷ್ಟೊಂದು ದೆವ್ವಗಳು ಸೆರೆ ಇರಲು ಕಾರಣ ಮಾಯದ ಫಕೀರ ದೇವರೆಂದು ತಿಳಿದುಬರುತ್ತದೆ. ಮತ್ತೊಂದು ಪಠ್ಯದಲ್ಲಿ ಮಾಯದ ಮರಾಠಿ ಎಂದು ಹೆಸರಿಸಿದ್ದಾರೆ. ಆಗಿನ ಕಾಲದಲ್ಲಿ ಪಾಳೆಗಾರರ ಆಳ್ವಿಕೆ ಇತ್ತು ಅಂತಹ ಒಂದು ಸಂದರ್ಭವನ್ನು ಕಾಣಲು ಈ ಕಾವ್ಯವನ್ನು ಸೃಷ್ಟಿಸಿರಬಹುದು.

**ಅಡಿಟಿಪ್ಪಣಿ**

೧. ಕೊಡ್ಲಿಕೆರೆ ಸಿ.ಎಂ.ಬಿ., **ಕನ್ನಡ ಕಾವ್ಯ ಪರಿಪ್ರೇಕ್ಷದಲ್ಲಿ ಕಾವ್ಯ ಮತ್ತು ತಾತ್ವಿಕತೆಗಳ ಸಂಬಂಧ** ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೨

# ಅಧ್ಯಾಯ: ನಾಲ್ಕು

## ಬಾಲನಾಗಮ್ಮ ಕಥನ ಕಾವ್ಯ:
## ಮಹಿಳಾ ಪ್ರತಿನಿಧೀಕರಣ ನಿರ್ವಚನ

೪.೧. ಬಾಲ ನಾಗಮ್ಮನ ಜನನದ ಸನ್ನಿವೇಶ

೪.೨. ನಾಗೇಂದ್ರ ನಾಗಮ್ಮನ ತಾಯಿಯನ್ನು ಪಡೆಯಲು ಬರುವ ಸಂದರ್ಭ

೪.೩. ನಾಗಮ್ಮನ ಮಲತಾಯಿ ನೀಡುವಂತ ಕಷ್ಟ

೪.೪. ನಾಗಮ್ಮನ ವೈವಾಹಿಕ ಬದುಕು

೪.೫. ಮಾಯದ ಫಕೀರ ಬಾಲನಾಗಮ್ಮನನ್ನು ಸೆರೆ ಹೊಯ್ಯುವ ಪ್ರಸಂಗ

೪.೬. ಬಾಲನಾಗಮ್ಮನ ಪಾವಿತ್ರತ್ತೆಯ ಪರೀಕ್ಷೆ ಗುರಿಯಾಗುವುದು

## ಅಧ್ಯಾಯ: ನಾಲ್ಕು

# ಬಾಲನಾಗಮ್ಮ ಮಹಿಳಾ ಪ್ರತಿನಿಧೀಕರಣ ಅಥವಾ ಬಾಲನಾಗಮ್ಮ ಸ್ತ್ರೀ ನಿರ್ವಚನ

### ೪.೧. ಬಾಲನಾಗಮ್ಮನ ಜನನ

ಭೂಚಕ್ರ ಪಟ್ಟಣದ ನವಭೋಜರಾಜನು ತಂದನತಾನ
ಆಗ ನವಭೋಜರಾಜನ ಮಡದಿ ಭೂಲಕ್ಷ್ಮೀದೇವಿ ತಂದನ್ನತಾನ"
ಭೂಲಕ್ಷ್ಮೀದೇವಿಗೆ ಮಕ್ಕಳ ಸಂತಾನವಿಲ್ಲ
ಹುಟ್ಟುಬಂಜೆ ನಾವೀಗ ಆದೆವು ಶಿವನೆ
ಅಯ್ಯ ಅಕ್ಕಪಕ್ಕದ ರಾಣೀಯ ಬಂಜೆರಾಣಿ ಅನ್ನುತಾರೆ
ಆಗ ನವಭೋಜರಾಜನು ಏನೆಂದು ಹೇಳುತಾನೆ
ಕೇಲು ಕೇಳೆ ಪ್ರಾಣಕಾಂತೆ ಹೇಳುವಂಥ ಮಾತನ್ನು
ಬಾಲೆ ಯಾವದೇವರ ಹೊಕ್ಕು ಪುತ್ರಭಾಗ್ಯ ನಮಗಿಲ್ಲ
ಮಕ್ಕಳೆ ಇಲ್ಲವೆಂದು ಧರಣಿದುಃಖ ಮಾಡುತಾಳೆ
ಮದುವೆಯಾಗಿ ನಮಗೀಗ ಮೂವತ್ತಾರು ವರುಷ
ಪುತ್ರಸಂತಾನ ನಮಗಿಲ್ಲ ಅಂತ ದುಃಖ ಮಾಡುತ್ತಾಳೆ
ಗಂಡನಾದ ನವಭೋಜ ಬೇಂಟೆಗೆ ಹೊರಟಾನು
ಮಡದಿ ಭೂಲಕ್ಷ್ಮೀದೇವಿ ಏನು ಯೋಚನೆ ಮಾಡುತಾಳೆ
ನಾ ಎಲ್ಲಾದರು ಹೋಗಬೇಕು ಪ್ರಾಣಹತ್ಯೆ ಮಾಡಬೇಕು
ಅಯ್ಯ ಗಂಡನಿಲ್ಲದ ವೇಳೇಲಿ ಮನೆಮಠಬಿಟ್ಟಳು
ಕಾಡುಮಾರ್ಗ ಹಿಡಿಕೊಂಡು ಹೊರಟವಳೆ ಭೂಲಕ್ಷ್ಮಿ

ಅಯ್ಯ ಹೋಗುವಂಥ ದಾರೀಲಿ ಋಷಿಯ ಆಶ್ರಮವೈತೆ
ಹೋಗುತಾಳೆ ಭೂಲಕ್ಷ್ಮಿ ಋಷಿಯ ಆಶ್ರಮವೈತೆ
ಕಣ್ಣನಾದರೆ ಮುಚ್ಚಿಕೊಂಡು ದೇವರ ಧ್ಯಾನದಲಿ
ಕುಳಿತರೆ ಋಷಿಗಳ ಕಂಡಳುರಾಣಿ
ಅಡ್ಡಬಿದ್ದು ಬೇಡುತಾಳೆ ಕಣ್ವ ಋಷಿಯ ತಾನು
ಆಗ ಕಣ್ಣುಬಿಟ್ಟು ನೋಡಿದ ಸಾಧು ಕಣ್ವಋಷಿ
ಅಮ್ಮ ನೀನ್ಯಾರು ಇಲ್ಲಿಗ್ಯಾಕೆ ಬಂದೆ ಹೇಳಮ್ಮ
ಸ್ವಾಮಿ ಭೂಚಕ್ರ ಪಟ್ಟಣದ ನವಭೋಜರಾಜನ
ಮಡದಿ ಭೂಲಕ್ಷ್ಮೀದೇವಿ ಎಂದು ಕರೆಯುತಾರೆ
ಆಗಂದು ಭೂಲಕ್ಷ್ಮೀದೇವಿ ದುಃಖ ಮಾಡುತಾಳೆ
ಅಮ್ಮ ಮಕ್ಕಳಿಲ್ಲವೆಂದು ದುಃಖನಾದರೆ ಮಾಡಬೇಡ
ಗಂಡು ಸಂತಾನವಿಲ್ಲ ಹೆಣ್ಣು ಮಕ್ಕಳಾಗುತಾವೆ
ಅಮ್ಮ ಹೆಣ್ಣು ಮಕ್ಕಳಾಗುತಾವೆ ಎಂಬ ಮಾತು ಕೇಳುತಾಳೆ
ಸ್ವಾಮಿ ಹೆಣ್ಣಾದರು ಆಗಲಿ ಗಂಡಾದರು ಆಗಲಿ
ಸ್ವಾಮಿ ಬಂಜೆಯೆಂಬೊ ಶಬ್ದನಾದರೆ ಹೋದರೆ ಸಾಕೆಂದಳು
ಅಯ್ಯ ಸಂತೋಷದಿಂದಲಿ ಕುಣಿತಾಳೆ ಮಾರಾಣಿ
ಆಗ ನೋಡುತಾನೆ ಕಣ್ವಋಷಿ ಸಂತೋಷದಿಂದಲಿ
ಅಮ್ಮ ಇಲ್ಲಿಗೆ ಗಾವುದ ದೂರದಲ್ಲಿ ನಾಗರಾಜನ ಮಾವಿನ ತೋಪು
ಮಧ್ಯಾಹ್ನ ಹನ್ನೆರಡು ಗಂಟೇಲಿ ನಾಗರಾಜ
ಇಲ್ಲದಿರೊ ವೇಳೆಯಲ್ಲಿ ಮಾವಿನಹಣ್ಣ ತಂದರೆ
ಅಮ್ಮ ಪುತ್ರ ಭಾಗ್ಯವಾಗುತದೆ ಬಂಜೆತನ ಹೋಗುತದೆ
ಅಂತಪ್ಪ ಮಾತಕೇಳಿ ಮಹಾರಾಣಿ ಭೂಲಕ್ಷ್ಮೀದೇವಿ
ಓಡಿಓಡಿ ಹೋಗುತಾಳೆ ನಾಗರಾಜನ ಮಾವಿನತೋಪಿಗೆ
ನಾಗರಾಜನ ಸುಳಿವೆಯಿಲ್ಲ. ತೋಟಕ್ಕಾದರೆ ಹೋಗುತಾಳೆ
ಅಯ್ಯ ಕಾವಲುಗಾರರಿಲ್ಲದ ತೋಟಕೋಗಿ ಹಣ್ಣನು ನೋಡಿದಳು
ಹಣ್ಣ ನೋಡಿ ಬಲು ಆಸೆ ಬರುತ್ತೈತೆ ಭೂಲಕ್ಷ್ಮೀದೇವಿಗೆ

ಉಟ್ಟ ಸೀರೆ ಅರ್ಧ ಹರಿದು ಜೋಳಿಗೆನಾದರು ಕಟ್ಟುತಾಳೆ
ಗಿಡಕೊಂದು ಮಾವಿನಹಣ್ಣ ಬಿಡಿಸುತಾಳೆ ಭೂಲಕ್ಷ್ಮಿ
ಅಲ್ಲಿಗೆ ನಾಗರಾಜನ ಅವದಿ ತಾ ಮುಗಿಯುತ ಬಂತು
ಹಣ್ಣನೆಲ್ಲ ಕುಯ್ಕೊಂಡು ಜೋಳಿಗೆಯ ತುಂಬಿಕೊಂಡು
ಹಿಂದುರಿಗೆ ಹೊರಟಾಳೆ ಮಹಾರಾಣಿ ಭೂಲಕ್ಷ್ಮೀದೇವಿ
ಹೊಳೆ ಬಾಕಲಿಗೆ ಬಂದಾಳೆ ದೊಡ್ಡದೊಂದು ಹುತ್ತವಾಯ್ತು
ಹುತ್ತದ ಮೇಲ್ಭಾಗದಲ್ಲಿ ಮಾವಿನಹಣ್ಣು ತೂಗತೈತೆ
ಎಷ್ಟೋ ಹಣ್ಣ ಕುಯ್ದುಕೊಂಡೆ ಈ ಹಣ್ಣು ಇರಲೇ ಇಲ್ಲ.
ತಲೆಯ ಮೇಗಲ ಗಂಟನೀಗ ನೆಲಕಾದರೆ ಇಡುತಾಳೆ
ಹುತ್ತದ ಮೇಲೆ ಹತ್ತಿದಾಳು ಮಾವಿನ ಹಣ್ಣ ಕೀಳುತಾಳೆ
ಅಯ್ಯ ಹುತ್ತದಿಂದ ಇಳಿಯುವಾಗ ಏಳು ಹೆಡೆ ಸರ್ಪ ಬಂತು
ಏಳು ಹೆಡೆಯ ಸರ್ಪ ಆದರೆ ಪ್ರತ್ಯಕ್ಷವಾಗಿ ನಿಂತಿರುವುದು
ಯಾರು ನರಮನುಷ್ಯರ ಸಂಚಾರವಾದರು ಇರಲಿಲ್ಲ
ನಮ್ಮ ತೋಟಕಾದರಿಲ್ಲಿ ಯಾರೊ ಇಲ್ಲಿ ಬಂದಿದ್ದಾರೆ
ನಾಗರಾಜನ ಅಪ್ಪಣೆಯಿಲ್ದೆ ಇವಳನೀಗ ಕಚ್ಚಬೇಕು
ಎಂದು ಕೋಪದಿಂದ ಹೇಳುತದೆ ಸರ್ಪನಾಗ
ಸರ್ಪಕಂಡು ಹೆದರಿಕೊಂಡು ಭೂಲಕ್ಷ್ಮೀದೇವಿ ತಾನು
ಕೆಟ್ಟನಲ್ಲ ಶಿವನೆಯೆಂದು ಹುತ್ತದಿಂದ ದುಮುಕಿದಳು
ಹುತ್ತದಿಂದ ದುಮುಕಿದಳು ಕಿಟ್ಟನಾದರೆ ಕಿರುಚಿದಳು
ನಾಗರಾಜನಾದರಾಗ ಏಳು ವರ್ಷದ ಮಗನೆ ಆಗಿ
ಅಮ್ಮ ನೀನು ಯಾರು ಇಲ್ಲಿಗೇಕೆ ಬಂದೆ ಹೇಳು
ಸ್ವಾಮಿ ನವಭೋಜರಾಜನ ಮಡದಿ ಭೂಲಕ್ಷ್ಮೀದೇವಿ
ಎಂದು ನನ್ನ ಕರೆಯುತಾರೆ ಎನ್ನುತಾಳೆ ಭೂಲಕ್ಷ್ಮೀದೇವಿ
ಮದುವೆಯಾಗಿ ಮುವತ್ತಾರು ವರ್ಷವಾದರೆ ಆಯಿತೀಗ
ಕಂಡ ದೇವರ ಬೇಡಿಕೊಂಡು ಪುತ್ರಭಾಗ್ಯ ನಮಗೆಯಿಲ್ಲ
ಋಷಿಯ ಆಶ್ರಮದಿಂದ ನಾನು ನಿಮ್ಮ ಬಳಿಗೆ ಬಂದಿದ್ದೇನಿ

ಬಂಜೆಯೆಂಬೊ ಮಾತಕೇಳಿ ಬಹಳ ಭಯವ ಪಡುತಾನೆ
ಅಮ್ಮ ಬಂಜೆಯಾದ ದೆಸೆಯಿಂದ ನಿನ್ನ ನಾನು ಕಚ್ಚೋದಿಲ್ಲ
ಕೈಯ್ಯಲಿರುವ ಮಾವಿನಹಣ್ಣ ಹಿಡಿದು ನಿಂತಳೆ ಮಹಾರಾಣಿ
ಕಚ್ಚೋದಿಲ್ಲ ಅನ್ನೊ ಮಾತು ಕೇಳಿ ಮಹಾರಾಣಿ ತಾನು
ಧೈರ್ಯದಿಂದ ನಿಂತುಕೊಂಡ್ಲು ಮಹರಾಣಿ ಭೂಲಕ್ಷ್ಮಿದೇವಿ
ಕೈಯ್ಯಲಿರೋ ಮಾವಿನಹಣ್ಣ ತೆಗೆದುಕೊಂಡು ಹೋಗಿ ನೀನು
ಮಾವಿನಹಣ್ಣು ಏಳುಚೂರ ಮಾಡಬೇಕು ಕೇಳುತಾಯಿ
ಅಮ್ಮ ನಡುಮಲ್ಲಿ ಕರಿಕಂಬ್ಳಿ ಗದ್ದಿಗೆನಾದರು ಹಾಕಬೇಕು
ಅಮ್ಮ ಏಳುಪೂಜೆ ಮಾಡಬೇಕು ಏಳುಜನ ಮಕ್ಕಳಾಗುತಾರೆ
ಅಮ್ಮ ಆರುಜನಕೆ ಕಿರಿಯೋಳಿಗೆ ನನ್ನ ಹೆಸರ ಕಟ್ಟಬೇಕು
ಮಕ್ಕಳಾದ ಏಳು ವರ್ಷಕೆ ನಾನಾದರು ಬರುತೀನಿ
ಅಮ್ಮ ನಾನು ಬಂದು ಕಚ್ಚುತೀನಿ ನನ್ನ ದಣಿಯ ಮಾತಿನಂತೆ
ಸ್ವಾಮಿ ಮಕ್ಕಳ ಮಕ ನೋಡಿದ ಮೇಲೆ ನಾನು ಸತ್ತರು ಚಿಂತೆಯಿಲ್ಲ
ಬಂಜೆತನ ಹೋದರೆ ಸಾಕು ಎನ್ನುತಾಳೆ ಭೂಲಕ್ಷ್ಮಿದೇವಿ
ಸ್ವಾಮಿ ಏಳು ವರ್ಷ ತುಂಬಿದ ಮೇಲೆ ನಿನ್ನವತ ಆಗುತೀವಿ
ಎಂದು ನಾಗರಾಜನಿಗೆ ಭಾಷೆಕೊಟ್ಟು ಬರುತಾಳೆ
೨
ಅಯ್ಯ ಅಷ್ಟು ಮಾವಿನಹಣ್ಣುಗಳೆಲ್ಲ ಮಾಯವಾಗಿ ಹೋಗುತಾವೆ
ಒಂದು ಮಾವಿನ ಹಣ್ಣ ತಂದು ಕರಿಕಂಬಳಿ ಗದ್ದಿಗೆ ಹಾಸಿ
ಕರಿಕಂಬಳಿ ಗದ್ದಿಗೆ ಹಾಸಿ ಭೂಲಕ್ಷ್ಮೀದೇವಿ ಆಗ
ಏಳುಪಾಲು ಮಾಡುತಾಳೆ ಒಂದು ಮಾವಿನ ಹಣ್ಣನಾದರೆ
ಕರಿಯ ಕಂಬಳಿಯ ಮೇಲೆ ಜೋಳನಾದರೆ ಇಡುತಲವಳೆ
ಏಳುಪೂಜೆ ಮಾಡುತಾಳೆ ಮಹಾರಾಣಿ ಭೂಲಕ್ಷ್ಮೀದೇವಿ
ಏಳುಜನ ಹೆಣ್ಣುಮಕ್ಕಳು ಆಗುತವೆ ಭೂಲಕ್ಷ್ಮೀದೇವಿಗೆ

ಭೂಚಕ್ರ ಪಟ್ಟಣದ ನವಭೋಜರಾಜ ಮತ್ತು ಅವನ ಮಡದಿ ಭೂಲಕ್ಷ್ಮಿದೇವಿ. ಭೂಲಕ್ಷ್ಮೀ ದೇವಿಗೆ ಮದುವೆಯಾಗಿ ಮೂವತ್ತಾರು ವರ್ಷವಾದರೂ ಮಕ್ಕಳು ಆಗಿರುವುದಿಲ್ಲ.

ಆದ್ದರಿಂದ ಭೂಲಕ್ಷ್ಮೀದೇವಿಗೆ ಅಕ್ಕಪಕ್ಕದ ರಾಣಿಯರು ಬಂಜೆ ಎನ್ನುತ್ತಿರುತ್ತಾರೆ. ಇದನ್ನು ಕಂಡು ಭೂಲಕ್ಷ್ಮೀದೇವಿ ಗಂಡ ನವಭೋಜರಾಜ ಬೇಟೆಗೆ ಹೋದ ಸಂದರ್ಭವನ್ನು ಕಂಡು ಭೂಲಕ್ಷ್ಮಿದೇವಿ ಎಲ್ಲಾದರೂ ಹೋಗಿ ಪ್ರಾಣಹತ್ಯೆ ಮಾಡಿಕೊಳ್ಳಬೇಕು ಅಂತ ಯೋಚಿಸುತ್ತಿರುತ್ತಾಳೆ. ಅದೇ ಸಮಯಕ್ಕೆ ನವಭೋಜರಾಜ ಭೇಟೆಗೆ ಹೋಗುತ್ತಾನೆ. ಇದನ್ನರಿತ ಭೂಲಕ್ಷ್ಮೀದೇವಿ ಪತಿ ಇಲ್ಲದ ಸಂದರ್ಭದಲ್ಲಿ ಮನೆ ಮಠಬಿಟ್ಟು ಕಾಡುಮಾರ್ಗ ಹಿಡಿದುಕೊಂಡು ಹೋಗುತ್ತಾಳೆ. ಹೋಗುವಂಥ ದಾರಿಯಲ್ಲಿ ಋಷಿಯ ಆಶ್ರಮವಿರುತ್ತದೆ. ಆ ಆಶ್ರಮದಲ್ಲಿ ಕಣ್ಣುಮುಚ್ಚಿಕೊಂಡು ದೇವರ ಧ್ಯಾನದಲ್ಲಿ ಕುಳಿತಿರುವ ಋಷಿಗಳನ್ನು ಕಂಡು ರಾಣಿ ಅಡ್ಡಬಿದ್ದು ಬೇಡಿಕೊಳ್ಳುತ್ತಾಳೆ. ಆಗ ಅಲ್ಲಿ ಧ್ಯಾನದಲ್ಲಿರುವ ಕಣ್ವಋಷಿ ಕಣ್ಣುಬಿಟ್ಟು ನೋಡಿದ. ನೋಡಿ ಅಮ್ಮ ನೀನ್ಯಾರು ಇಲ್ಲಿಗೆ ಯಾಕೆ ಬಂದಿರುವೆ ಹೇಳಮ್ಮ ಆಂತ ಕೇಳಿದರು. ಆಗ ಭೂಲಕ್ಷ್ಮೀದೇವಿ ಭೂಚಕ್ರ ಪಟ್ಟಣದ ನವಭೋಜರಾಜನ ಮಡದಿ ಭೂಲಕ್ಷ್ಮೀದೇವಿ ಎಂದು ಹೇಳುತ್ತಾಳೆ. ಹೇಳುತ್ತಾ ದುಃಖ ಪಡುತ್ತಾಳೆ. ಆಗ ಕಣ್ವಋಷಿಯು ದುಃಕ ಪಡಬೇಡಮ್ಮ ಗಂಡು ಸಂತಾನವಿಲ್ಲ ಹೆಣ್ಣು ಮಕ್ಕಳಾಗುತ್ತವೆ ಎಂದು ಹೇಳುತ್ತಾರೆ. ಅದಕ್ಕೆ ಭೂಲಕ್ಷ್ಮೀದೇವಿ ಸ್ವಾಮಿ ಹೆಣ್ಣಾದರು ಆಗಲಿ ಗಂಡಾದರೂ ಆಗಲಿ ಸ್ವಾಮಿ ಬಂಜೆಯೆನ್ನುವ ಶಬ್ದ ಹೋದರೆ ಸಾಕೆನ್ನುತ್ತಾಳೆ.

ಕಣ್ವ ಋಷಿ ಸಂತೋಷದಿಂದ ಅಮ್ಮ ಇಲ್ಲಿಂದ ಗ್ರಾಮದ ದೂರದಲ್ಲಿ ನಾಗರಾಜನ ಮಾವಿನ ತೋಪು ಇದೆ. ಮಧ್ಯಾಹ್ನ ಹನ್ನೆರಡು ಗಂಟೆಯಲ್ಲಿ ನಾಗರಾಜ ಇಲ್ಲದಿರುವ ಸಮಯದಲ್ಲಿ ಮಾವಿನ ಹಣ್ಣು ತಂದರೆ ಅಮ್ಮ ಪುತ್ರ ಭಾಗ್ಯವಾಗುತ್ತದೆ, ಬಂಜೆತನ ಹೋಗುತ್ತದೆ ಎಂದು ಹೇಳುತ್ತಾರೆ. ಈ ಮಾತನ್ನು ಕೇಳಿದ ಭೂಲಕ್ಷ್ಮೀದೇವಿ ಓಡಿ ಓಡಿ ಹೋಗುತ್ತಾಳೆ. ನಾಗರಾಜನ ಮಾವಿನ ತೋಪಿಗೆ, ಅಲ್ಲಿ ನಾಗರಾಜನ ಸುಳಿವೆಯಿಲ್ಲ. ತೋಟಕ್ಕೆ ಕಾವಲುಗಾರರು ಇಲ್ಲ, ತೋಟಕ್ಕೆ ಹೋಗಿ ಹಣ್ಣನ್ನು ನೋಡಿದಳು. ಹಣ್ಣು ನೋಡಿ ಬಲು ಆಸೆ ಬರುತ್ತದೆ ಭೂಲಕ್ಷ್ಮೀದೇವಿಗೆ ಉಟ್ಟ ಸೀರೆ ಅರ್ಧ ಹರಿದು ಜೋಳಿಗೆ ಕಟ್ಟಿಕೊಂಡು ಗಿಡಕೊಂದರಂತೆ ಮಾವಿನ ಹಣ್ಣು ಬಿಡಿಸಿಕೊಳ್ಳುತ್ತಾಳೆ. ಅಲ್ಲಿಗೆ ನಾಗರಾಜನ ಅವಧಿ ಮುಗಿತಾ ಬರುತ್ತದೆ. ಹಣ್ಣನ್ನೆಲ್ಲ ಕುಯ್ಕೊಂಡು ಜೋಳಿಗೆಯಲ್ಲಿ ತುಂಬಿಕೊಂಡು ಹಿಂದಿರುಗಿ ಹೊರಡುತ್ತಾಳೆ ಮಹಾರಾಣಿ ಭೂಲಕ್ಷ್ಮೀದೇವಿ. ಹೊಳೆ ಬಾಕಲಿಗೆ ಬರುತ್ತಾಳೆ ದೊಡ್ಡದೊಂದು ಹುತ್ತವಾಗುತ್ತದೆ. ಹುತ್ತದ ಮೇಲ್ಭಾಗದಲ್ಲಿ ಮಾವಿನ ಹಣ್ಣು ತೂಗುತ್ತಿರುತ್ತದೆ. ಎಷ್ಟೊಂದು ಹಣ್ಣು ಕುಯ್ಕೊಂಡರು ಈ ಹಣ್ಣು ಇರಲೇ ಇಲ್ಲ ಅಂತ ಹೇಳಿ ತಲೆ ಮೇಲಿನ ಗಂಟನ್ನು ನೆಲದಮೇಲೆ ಇಟು ಹುತ್ತದ ಮೇಲೆ ಹತ್ತಿ ಮಾವಿನ ಹಣ್ಣು ಕೀಳುತ್ತಾಳೆ. ಕಿತ್ತುಕೊಂಡು ಹುತ್ತದಿಂದ ಇಳಿಯುವಾಗ ಏಳು ಹೆಡೆ ಸರ್ಪ ಬರುತ್ತೇ, ಏಳು ಹೆಡೆಯ ಸರ್ಪ ಪ್ರತ್ಯಕ್ಷವಾಗಿ ನಿಂತಿರುತ್ತದೆ. ಯಾರೋ

ನರ ಮನುಷ್ಯರ ಸಂಚಾರವಾಗಿದೆ. ನಮ್ಮ ತೋಟದಲ್ಲಿ ಯಾರೋ ಬಂದಿದ್ದಾರೆ. ನಾಗರಾಜನ ಅಪ್ಪಣೆಯಿಲ್ಲದೆ ಅವಳನ್ನು ಕಚ್ಚಬೇಕು ಎಂದು ಕೋಪದಿಂದ ಹೇಳುತ್ತದೆ. ಸರ್ಪವನ್ನು ಕಂಡು ಹೆದರಿಕೊಂಡು ಭೂಲಕ್ಷ್ಮೀದೇವಿ ತಾನು ಕೆಟ್ಟೆನಲ್ಲ ಶಿವನೆ ಎಂದು ಹುತ್ತದಿಂದ ಧುಮುಕಿದಳು. ಹುತ್ತದಿಂದ ಧುಮುಕಿ ಕಿಟ್ಟ ಅಂತ ಕಿರುಚಿದಳು. ಇದನ್ನು ಕಂಡು ನಾಗರಾಜ ಆಗ ಏಳು ವರ್ಷದ ಮಗನಾಗಿ ಅಮ್ಮ ನೀನು ಯಾರು ಇಲ್ಲಿಗೆ ಏಕೆ ಬಂದಿರುವೆ ಹೇಳು ಅಂತ ಕೇಳುತ್ತಾನೆ. ಆಗ ಭೂಲಕ್ಷ್ಮೀದೇವಿ ಸ್ವಾಮಿ ನಾನು ನವಭೋಜರಾಜನ ಮಡದಿ ಎಂದು ಹೇಳುತ್ತಾಳೆ. ಭೂಲಕ್ಷ್ಮೀದೆವಿ ಮದುವೆಯಾಗಿ ಮೂವತ್ತಾರು ವರ್ಷವಾಯಿತು. ಕಂಡ ದೇವರಿಗೆ ಬೇಡಿಕೊಂಡರು ಪುತ್ರಭಾಗ್ಯ ನಮಗೆಯಿಲ್ಲ. ಋಷಿಯ ಆಶ್ರಮದಿಂದ ನಾನು ನಿಮ್ಮ ಬಳಿಗೆ ಬಂದಿದ್ದೀನಿ ಬಂಜೆಯೆಂಬ ಮಾತು ಕೇಳಿ ಬಹಳ ಭಯಪಟ್ಟಿದ್ದೇನೆ ಎಂದು ಹೇಳುತ್ತಾಳೆ. ಆಗ ನಾಗರಾಜ ಅಮ್ಮ ಬಂಜೆಯಾದ್ದರಿಂದ ನಿನ್ನ ನಾನು ಕಚ್ಚೋದಿಲ್ಲ ಅಂತ ಹೇಳುತ್ತಾನೆ. ಈ ಕಚ್ಚೋದಿಲ್ಲ ಅನ್ನೋ ಮಾತು ಕೇಳಿ ಮಹಾರಾಣಿ ತಾನು ಧೈರ್ಯದಿಂದ ನಿಂತುಕೊಂಡಳು. ನಾಗರಾಜ ನಿನ್ನ ಕೈಯಲ್ಲಿರೋ ಮಾವಿನ ಹಣ್ಣು ತೆಗೆದುಕೊಂಡು ಹೋಗಿ ನೀನು ಮಾವಿನಹಣ್ಣು ಏಳುಚೂರು ಮಾಡಬೇಕು. ಏಳು ಚೂರು ಮಾಡಿ ನಡುಮನೆಯಲ್ಲಿ ಕರಿಕಂಬಳಿ ಗದ್ದಿಗೆ ಹಾಕಿ, ಏಳುಪೂಜೆ ಮಾಡಬೇಕು. ಏಳು ಜನ ಮಕ್ಕಳಾಗುತ್ತಾರೆ. ಆ ಏಳು ಜನ ಮಕ್ಕಳಲ್ಲಿ ಏಳನೆಯವಳಿಗೆ ನನ್ನ ಹೆಸರು ಇಡಬೇಕು ಅಂತ ಹೇಳಿ ಮಕ್ಕಳಾಗಿ ಏಳುವರ್ಷ ಆದ ನಂತರ ನಾನು ಬರುತ್ತೀನಿ. ಬಂದು ಕಚ್ಚುತ್ತೀನಿ ನನ್ನ ದಣಿಯಮಾತಿನಂತೆ ಅಂತ ಹೇಳುತಾನೆ. ಭೂಲಕ್ಷ್ಮೀ ದೇವಿ ನನ್ನ ಜೀವ ಹೋದ್ರು ಪರವಾಗಿಲ್ಲಸ್ವಾಮಿ ನಾನು ಬಂಜೆಯೆನ್ನುವ ಶಬ್ದ ತಡಿಬೇಕು ಅಂತ ಹೇಳುತ್ತಾಳೆ. ಅಂದ್ರೆ ಇಲ್ಲಿ ಹೆಣ್ಣಿಗೆ ತನ್ನ ಜೀವಕ್ಕಿಂತ ಸಂತಾನ ಪಡೆಯಬೇಕು. ಅಂದರೆ ಹೆಣ್ಣಿಗೆ ಬಂಜೆ ಎನ್ನುವಂತಹ ಶಬ್ದದಿಂದ ಮುಕ್ತಿಯನ್ನು ಪಡೆಯಬೇಕು. ಆದರೆ ಇಲ್ಲಿ ಹೆಣ್ಣಿಗೆ ತನ್ನ ಜೀವಕ್ಕಿಂತ ಸಂತಾನ ಪಡೆಯಬೇಕೆಂಬುದು ಈ ಕಾವ್ಯದಲ್ಲಿ ಮೂಡಿಬಂದಿದೆ. ಆಗ ಭೂಲಕ್ಷ್ಮೀದೇವಿ ಸ್ವಾಮಿ ಏಳು ವರ್ಷ ತುಂಬಿದ ಮೇಲೆ ನಿನ್ನ ವಶ ಆಗುತ್ತೀನಿ ಎಂದು ನಾಗರಾಜನಿಗೆ ಭಾಷೆಕೊಟ್ಟು ಬರುತ್ತಾಳೆ. ಈ ಭಾಗ ಹೆಣ್ಣು ಮಗಳೊಬ್ಬಳು ತನ್ನ ಮಕ್ಕಳ ಸಂತಾನ ಪಡೆಯುವ ಬಗೆಗೆ ನಮ್ಮ ಹಲವಾರು ಜಾನಪದ ಕಾವ್ಯ, ಕಥೆಗಳಲ್ಲಿ ಇಂತಹ ಆಶಯಗಳು ಸಾಮಾನ್ಯವಾಗಿ ಕಂಡುಬರುತ್ತವೆ. ಉದಾಹರಣೆಗೆ ಮಲೆ ಮಾದೇಶ್ವರ ಕಾವ್ಯದ ಸಂಕಮ್ಮ, ಮಾದೇಶ್ವರನಿಂದ ಪಿಂಡ ಪ್ರಸಾದವನ್ನು ಸ್ವೀಕರಿಸುವುದು, ಕುಮಾರರಾಮನ ಕಾವ್ಯದಲ್ಲಿ ಹರಿಯಳದೇವಿ ಮಾವಿನ ಹಣ್ಣು ಪಡೆದು

ಕುಮಾರ ರಾಮನಿಗೆ ಜನ್ಮ ನೀಡುವುದು, ಜುಂಜಪ್ಪನ ಕಾವ್ಯ ಎಲ್ಲಮ್ಮನ ಕಾವ್ಯ ಇತ್ಯಾದಿ ಕಾವ್ಯಗಳಲ್ಲಿ ಫಲದ ಮೂಲಕ ಫಲ ಎಂಬ ಅವರ ಕಲ್ಪನೆ ಮತ್ತೊಂದು ಬಗೆಯ ವಾಸ್ತವಿಕತೆಯನ್ನು ಸೂಚಿಸುತ್ತದೆ. ಫಲ ನೀಡುವ ದೇವರು ದೇವರ ವೇಷವೊಂದಿದ್ದರೆ ಆ ರೂಪದಲ್ಲಿ ಬಾರದೆ ಸಾಮಾನ್ಯ ಮನುಷ್ಯನಾಗಿ ಬಂದು ಮಕ್ಕಳ ಫಲ ದಾನ ಮಾಡುವ ವಿಷಯವಂತು ಸಾಮಾನ್ಯ ಮಾನವನಿಂದಲ್ಲದೆ ದೇವರಿಂದ ಇದು ದುಸಾಧ್ಯವೆಂಬ ಒಳನೋಟವನ್ನು ಸೂಚಿಸುತ್ತದೆ. ಆದರೆ ಸಾಮಾಜಿಕ ಹಾಗೂ ಸಾಂಸ್ಕೃತಿಕ ಆವರಣಗಳಂತ ಇವುಗಳನ್ನು ಬಿಂಬಿಸುವ ಬಗೆ ಮಾತ್ರ ಬೇರೆಯೇ ಆಗಿದೆ. ಈ ಕಾವ್ಯದ ಮತ್ತೊಂದು ವಿಶೇಷವೆಂದರೆ ನಾಗೇಂದ್ರ(ಸರ್ಪ)ನಿಂದ ಮಕ್ಕಳನ್ನು ಪಡೆಯುವುದು.

**೪.೨. ನಾಗೇಂದ್ರ ನಾಗಮ್ಮನ ತಾಯಿಯನ್ನು ಪಡೆಯಲು ಬರುವ ಸಂದರ್ಭ**

ಒಂದು ವರ್ಷವಾಯಿತೆಂದು ಎರಡು ವರ್ಷವಾಗುತ್ತೈತೆ
ಆಗ ಮೂರುವರ್ಷ ತುಂಬಿತಯ್ಯ ನಾಲ್ಕು ವರ್ಷ ತುಂಬುತ್ತೈತೆ
ಆಗ ನವಭೋಜರಾಜನಿಗೆ ಏನು ಯೋಚನೆ ಬರುತ್ತೈತೆ
ಏಳು ಜನ ಮಕ್ಕಳಿಗೆ ವಿದ್ಯಾಭ್ಯಾಸ ಮಾಡಿಸಬೇಕು
ಉಪಾದ್ರ ಗೊತ್ತುಮಾಡಿ ಮಾಡಿಮೇಲೆ ಓದಿಸುತ್ತಾನೆ
ಆರು ಜನಕೆ ಕಿರಿಯವಳೆ ಬಾಲನಾಗಮ್ಮಯ್ಯ
ಐದು ವರ್ಷ ತುಂಬುತ್ತೈತೆ ಆರುವರ್ಷವಾಗುತ್ತೈತೆ
ಏಳು ವರ್ಷ ನಡೆಯುತ್ತೈತೆ ಆಗ ಸ್ವಪ್ನದಲ್ಲಿ ನಾಗರಾಜ
ಅಮ್ಮ ಏಳುಜನ ಮಕ್ಕಳಿಗೆ ಏಳು ವರ್ಷವಾಗುತ್ತೈತೆ
ಅಮ್ಮ ನನ್ನ ದಣಿ ಅಪ್ಪನೆಯಂತೆ ನಿನ್ನನಾದರೆ ಕಚ್ಚಬೇಕು
ಅಮ್ಮ ಮುಂದಿನ ತಿಂಗಳು ದಶಮಿ ಶುಕ್ರವಾರ
ರಾತ್ರಿ ಹನ್ನೆರಡು ಗಂಟೆಗೆ ಕಚ್ಚುತೀನಿ
ಎಂಬ ಸ್ವಪ್ನ ಕಂಡಳು ಕಿಟ್ಟನೆ ಕಿರುಚಿದಳು ರಾಣಿ
ಅರ್ಧರಾತ್ರಿ ವೇಳೆಯಲ್ಲಿ ಎದ್ದು ದುಃಖ ಮಾಡುತಾಳೆ
ಗಂಡನಾದ ಭೋಜರಾಜನಿಗೆ ಎಚ್ಚರಿಕೆ ಆಗುತ್ತೈತೆ
ನಿಶಾರಾತ್ರಿ ವೇಳೆಯಲ್ಲಿ ಪ್ರಾಣಕಾಂತೆ ದುಃಖವೇಕೆ

ದುಃಖವೇಕೆ ಬಂತು ಹೇಳೆ ಮಡದಿ ಭೂಲಕ್ಷ್ಮಿದೇವಿ
ಮಕ್ಕಳಾದ ಏಲುವರ್ಷಕೆ ಸರ್ಪ ತನ್ನ ಕಚ್ಚುತೈತೆ
ಸ್ವಾಮಿ ಹಿಂದೆ ಮಕ್ಕಳ್ನ ಪಡೆಯುವಾಗ ಭಾಷೆನಾದರೆ ಕೊಟ್ಟಿದ್ದೆ
ರಾತ್ರಿ ಸ್ವಪ್ನದಲ್ಲಿ ನಾಗರಾಜನನ್ನು ಕಂಡುಬಿಟ್ಟೆ
ಸ್ವಾಮಿ ಮುಂದಿನ ತಿಂಗಳಾದರು ನನಗೆ ಮರಣಾವೆ ಬರುತೈತೆ
ಸ್ವಾಮಿ ನಾಗರಾಜನು ಬರುತಾನೆ ನನ್ನನಾದರೆ ಕಚ್ಚುತಾನೆ
ಏಳುಜನ ಮಕ್ಕಳು ಮುಂದೆ ತಬ್ಬಲಿನಾದರು ಆಗುತಾವೆ.

ಭೂಲಕ್ಷ್ಮೀದೇವಿ ಕೊಟ್ಟ ಮಾತಿನಂತೆ ನಾಗೇಂದ್ರ ಭೂಲಕ್ಷ್ಮೀ ದೇವಿಯನ್ನು ಕಚ್ಚಲು ಬರುವಂತಹ ಸಂದರ್ಭ ಇದಾಗಿದೆ. ಈ ಕಾವ್ಯ ಭಾಗದಲ್ಲಿ ಕೊಟ್ಟ ಮಾತಿಗೆ ತಪ್ಪಬಾರದು ಎನ್ನುವಂತ ಮಾತನ್ನೇ ಬಿಂಬಿಸುವಂತಹ ಕಾವ್ಯ ಭಾಗ ಇದಾಗಿದೆ ಎಂದು ಹೇಳಬಹುದು. ಅಂದರೆ, ಏಳು ಜನ ಮಕ್ಕಳನ್ನು ಪಡೆದ ಭೂಲಕ್ಷ್ಮೀ ದೇವಿ ಮತ್ತು ಭೋಜರಾಜ ಸಂತೋಷದಿಂದ ಇರುತ್ತಾರೆ. ಆ ಏಳು ಜನ ಮಕ್ಕಳಿಗೆ ಚಿನ್ನದ ತೊಟ್ಟಿಲು ಮಾಡಿಸಿ ರನ್ನದ ಸರಪನಿ ಮಾಡಿಸಿ ಏಳು ಜನರನ್ನು ನೋಡಿಕೊಳ್ಳಲು ಏಳು ಜನ ದಾದೀಯರನ್ನು ನೇಮಕ ಮಾಡಿರುತ್ತಾನೆ. ಆ ಏಳು ಜನ ಮಕ್ಕಳನ್ನು ಸಾಕುತ್ತಿರುವಾಗ ಒಂದು ವರ್ಷವಾಯಿತು, ಎರಡು ವರ್ಷವಾಗುತ್ತೆ, ಮೂರು ವರ್ಷ ತುಂಬುತ್ತೆ, ನಾಲ್ಕು ವರ್ಷ ತುಂಬುತ್ತದೆ. ಆಗ ನವಭೋಜರಾಜನಿಗೆ ಏಳು ಜನ ಮಕ್ಕಳಿಗೆ ವಿದ್ಯಾಭ್ಯಾಸ ಮಾಡಿಸಬೇಕು. ಉಪಾಧ್ಯಾಯರನ್ನು ಗೊತ್ತು ಮಾಡಿ ಓದಿಸುತ್ತಾನೆ. ಆರು ಜನರಲ್ಲಿ ಕಿರಿಯವಳೇ ಬಾಲನಾಗಮ್ಮ. ಐದು ವರ್ಷ ತುಂಬಿ ಆರು ವರ್ಷವಾಗುತ್ತೆ. ಏಳನೇ ವರ್ಷ ನಡಿತ್ತಿರುತ್ತದೆ. ಆಗ ಸ್ವಪ್ನದಲ್ಲಿ ನಾಗರಾಜ ಅಮ್ಮ ಏಳು ಜನ ಮಕ್ಕಳಿಗೆ ಏಳು ವರ್ಷವಾಗುತ್ತದೆ. ಅಮ್ಮ ನನ್ನ ದಣಿಯ ಅಪ್ಪಣೆಯಂತೆ ನಿನ್ನ ನಾನು ಕಚ್ಚಬೇಕು. ಮುಂದಿನ ತಿಂಗಳು ಶುಕ್ರವಾರ ದಶಮಿಯಂದು ರಾತ್ರಿ ಹನ್ನೆರಡು ಗಂಟೆಗೆ ಕಚ್ಚುತ್ತೇನೆ ಎನ್ನುವಂತಹ ಕನಸನ್ನು ಭೂಲಕ್ಷ್ಮೀದೇವಿ ಕಂಡು ಕಿಟ್ಟನೆ ಕಿರುಚಿದಳು. ಕಿರುಚಿ ರಾಣಿ ಅರ್ಧರಾತ್ರಿ ಸಮಯದಲ್ಲಿ ಎದ್ದು ದುಃಖಪಡುತ್ತಿರುತ್ತಾಳೆ. ಆ ಸಮಯದಲ್ಲಿ ಪತಿಯಾದ ನವಭೋಜರಾಜನಿಗೆ ಎಚ್ಚರಿಕೆ ಆಗುತ್ತೇ. ಆಗ ನವಭೋಜರಾಜ ನಿಶಾರಾತ್ರಿಯ ಸಮಯದಲ್ಲಿ ಮಹಾರಾಣಿ ಏಕೆ ದುಃಖವೆಂದು ಕೇಳುತ್ತಾನೆ. ಆಗ ಭೂಲಕ್ಷ್ಮೀ ದೇವಿ ಮಕ್ಕಳಾದ ಏಳು ವರ್ಷಕ್ಕೆ ಸರ್ಪ ನನ್ನ ಕಚ್ಚುತ್ತದೆ ಎಂದು ಹೇಳುತ್ತಾಳೆ. ಅಂದರೆ ಈ ಹಿಂದೆ ನಾನು ಮಕ್ಕಳನ್ನು ಪಡೆಯುವಾಗ ನಾಗರಾಜನಿಗೆ ಭಾಷೆ ಕೊಟ್ಟಿದ್ದೆ. ಅದಕ್ಕೆ

ರಾತ್ರಿ ಸ್ವಪ್ನದಲ್ಲಿ ನಾಗರಾಜನನ್ನು ಕಂಡೆ. ಮುಂದಿನ ತಿಂಗಳು ನನಗೆ ಮರಣ ಬರುತ್ತೆ, ನಾಗರಜ ಬರುತ್ತಾನೆ, ಬಂದು ನನ್ನ ಕಚ್ಚುತ್ತಾನೆ. ಆಗ ಏಳು ಜನ ಮಕ್ಕಳು ಮುಂದೆ ತಬ್ಬಲಿಯಾಗುತ್ತವೆ ಎಂದು ಹೇಳುತ್ತಾಳೆ. ಈ ಮಾತನ್ನು ಕೇಳಿದ ನವಭೋಜರಾಜ ದುಃಖ ಪಡುತ್ತಾನೆ. ಮತ್ತೆ ಭೂಲಕ್ಷ್ಮೀದೇವಿಗೆ ನೀನು ಭಯಪಡಬೇಡ, ಅರಗಿನ ಮನೆಯನ್ನು ಕಟ್ಟಿಸುತ್ತೀನಿ, ಉಕ್ಕಿನ ಕದವ ಮಾಡ್ಸೀತಿನಿ, ಎಷ್ಟು ಸರ್ಪ ಬಂದರೂ ಕೊಲೆ ಮಾಡಿಸ್ತೀನಿ, ಇನ್ನ ಮೇಲಿಂದ ಸರ್ಪಕ್ಕೆ ನೀನು ಭಯಪಡಬೇಡ ಎಂದು ಧೈರ್ಯವನ್ನು ತುಂಬುತ್ತಾನೆ. ಆಗ ಭೂಲಕ್ಷ್ಮೀದೇವಿ ಗಂಡ ಹೇಳಿದ ಮಾತನ್ನು ಕೇಳಿ ಧೈರ್ಯವನ್ನು ತಂದುಕೊಳ್ಳುತ್ತಾಳೆ. ಆಗ ನವಭೋಜರಾಜ ಅರಗಿನ ಮನೆಯನ್ನು ಕಟ್ಟಿಸಿ, ಅದಕ್ಕೆ ಉಕ್ಕಿನ ಕದವನ್ನು ಮಾಡಿದ. ಒಂದು ತಿಂಗಳು ತುಂಬುತ್ತಲೇ ಬರುತ್ತದೆ. ದಶಮಿಯ ದಿನ ಶುಕ್ರವಾರ ರಾತ್ರಿ ಹನ್ನೆರಡು ಗಂಟೆ. ಆಗ ಭೂಲಕ್ಷ್ಮೀದೇವಿ ಮಕ್ಕಳನ್ನು ಮನೆಯಲ್ಲಿಯೇ ಬಿಟ್ಟು ಅರಗಿನ ಮನೆಯನ್ನು ಸೇರುತ್ತಾಳೆ. ಅರಗಿನ ಮನೆಯ ಸುತ್ತ ಕೋಟೆಯ ಸುತ್ತಲಿರುವ ಅಗಳು. ಅಂದರೆ ಅದನ್ನು ತೆಗೆಯಲಾರದಂತೆ ಮಾಡಿಸಿ ಅದರ ಸುತ್ತ ಗಂಧದ ಸೌದೆ ತರಿಸಿ ಬೆಂಕಿ ಹಾಕಿಸಿದ. ಆ ಮನೆಗೆ ಏಳು ಜನ ಪಾಳೇಗಾರರನ್ನು ನೇಮಿಸುತ್ತಾನೆ. ಅವರಿಗೆ ಹೇಳುತ್ತಾನೆ ನಿಮಗೆ ಸರ್ಪ ಕಂಡರೆ ಬೆಂಕಿಗಾಕಿ ಬಿಡಿ ಎಂದು ರಾಜಾಜ್ಞೆಯನ್ನು ಮಾಡುತ್ತಾನೆ.

ಏಳು ಹೆಡೆಯ ಸರ್ಪವಾಗಿ ನಾಗರಾಜ ಪ್ರತ್ಯಕ್ಷನಾದ. ಪ್ರತ್ಯಕ್ಷವಾಗಿ ಏಳುಜನ ಹೆಣ್ಣು ಮಕ್ಕಳು ಮಲಗಿರುತ್ತಾರೆ. ಅಲ್ಲಿ ಭೂಲಕ್ಷ್ಮೀ ದೇವಿ ಇರುವುದಿಲ್ಲ. ಮತ್ತೆ ಮಹಡಿ ಮೇಲಿರುವ ಏಕಾಂತ(ರಹಸ್ಯ, ಗುಟ್ಟಾದ ಸ್ಥಳ) ಭವನಕ್ಕೆ(ಮನೆಗೆ) ಬರುತ್ತಾನೆ. ನಾಗರಾಜ ಬಲು ಕೋಪಗೊಂಡು ಈ ಹೆಣ್ಣುಮಗಳು ಪ್ರಾಣಭಯಕ್ಕೆ ಹೆದರಿ ಎಲ್ಲಿ ಅಡಗಿ ಮಲಗಿರಬಹುದು, ಅರಮನೆಯಲ್ಲಿಲ್ಲ. ತಿರುಗಿದರು ಮಹಾರಾಣಿ ಭೂಲಕ್ಷ್ಮೀದೇವಿಯ ಸುಳಿವಿಲ್ಲ. ಆ ನಂತರ ನಾಗರಾಜ ಒಂದು ನೊಣವಾಗಿ ತಾನು ಮಾಡಿಮೇಲಕ್ಕೆ ಹಾರುತ್ತಾನೆ. ಹಾರಿ ಸುತ್ತಮುತ್ತ ನೋಡುತ್ತಾನೆ. ಬೆಂಕಿ ನಾಗರಾಜನ ಕಣ್ಣಿಗೆ ಕಾಣುತ್ತದೆ. ಬೆಂಕಿಯ ಮಧ್ಯದಲ್ಲಿ ಭೂಲಕ್ಷ್ಮೀದೇವಿ ಅರಗಿನ ಮನೆಯ ಸೇರಿಕೊಂಡಿದ್ದಾಳೆ. ಅಲ್ಲಿಗೆ ನಾನು ಹೋಗಬೇಕು, ಹೋಗಿ ಕಚ್ಚಬೇಕು ಎಂದು ಮನದಲ್ಲಿ ನಿರ್ಧಾರ ಮಾಡಿ ಹೊರಟ, ಈ ರೂಪದಲ್ಲಿ ನಾನು ಹೋದರೆ ನನ್ನನ್ನು ಅವರು ಬಿಡುವುದಿಲ್ಲ ಎಂದು ಏಳು ಹೆಡೆಯ ನಾಗರಾಜ ಒಂದು ದುಂಬಿಯಾಗಿ, ಮೇಲೆ ಹಾರಿ ಅರಗಿನ ಮನೆಯ ಒಂದು ಸಣ್ಣಕಿಟಕಿಯಲ್ಲಿ ಕುಳಿತುಕೊಂಡು ನೋಡುತ್ತಾನೆ. ಮಹಾರಾಣಿ ಭೂಲಕ್ಷ್ಮೀದೇವಿ ಮಲಗುವಂತಹ ಮಂಚದ ಹತ್ತಿರ ಏಳು ಸುತ್ತಿನ ಮಲ್ಲಿಗೆ

ಹೂವು ಆಗಿ ಭೂಲಕ್ಷ್ಮೀದೇವಿಯ ನರಿಗೆ ಮೇಲೆ ಬೀಳುತ್ತೆ. ಈ ಮಲ್ಲಿಗೆ ಹೂ ಇಂಥ ನಿಶಾರಾತ್ರಿ ಎಲ್ಲಿಂದ ಬಂತು ಎಂದು ಭೂಲಕ್ಷ್ಮೀದೇವಿ ಎರಡು ಕೈಯಿಂದ ಮಲ್ಲಿಗೆ ಹೂ ಎತ್ತಿಕೊಂಡು ಕಣ್ಣಿಗೆ ಒತ್ತಿಕೊಂಡು ತಲೆಗೆ ಮೂಡಿಯೋಕೆ ಮೇಲಕ್ಕೆ ಎತ್ತುತ್ತಾಳೆ. ರಾತ್ರಿ ಹನ್ನೆರಡು ಗಂಟೆಯಾದರೆ ಅಲ್ಲಿಗೆ ಮುಗಿಯುತ್ತೆ. ಆಗ ಏಳು ಹೆಡೆಯ ಸರ್ಪವಾಗಿ ಪ್ರತ್ಯಕ್ಷವಾಗುತ್ತೆ. ಆಗ ಭೂಲಕ್ಷ್ಮೀದೇವಿ ಸರ್ಪವ ಕಂಡು ಹೆದರಿದಳು. ಹೆದರಿ ಮಂಚದಿಂದ ಕೆಳಕ್ಕೆ ಬೀಳುತ್ತಾಳೆ. ಆಗ ಏಳು ಹೆಡೆ ಸರ್ಪ ಹೋಗಿ ಏಳು ವರ್ಷದ ಮಗುವಾಗಿ ನಿಂತುಕೊಳ್ಳುತ್ತಾನೆ ನಾಗರಾಜ. ನಿಂತುಕೊಂಡು ಹಿಂದೆ ಮಕ್ಕಳಿಲ್ಲವೆಂದು ನನ್ನ ಬೇಡಿದ್ದು, ಒಂದು ಕಾಲದಲ್ಲಿ ಈಗ ಅರಗಿನ ಮನೆಯಲ್ಲಿ ಅಡಗಿರೋದು ಒಂದು ಕಾಲ. ನನ್ನ ದಣಿಯ ಅಪ್ಪಣೆಯಂತೆ ನಾನು ನಿನ್ನ ಕಚ್ಚುತ್ತೇನೆ ಎಂದು ಹೇಳಿದ. ಆಗ ಭೂಲಕ್ಷ್ಮೀದೇವಿ ನನ್ನ ಗಂಡನ ಮಾತು ಕೇಳಿ ನಾನು ಮೋಸ ಹೋದೆ. ಸ್ವಾಮಿ ನಿನ್ನ ಮಾತಿನಂತೆ ನನ್ನ ಕಚ್ಚು ಅನ್ನುತ್ತಾಳೆ. ಆಗ ನಾಗರಾಜ ಸರ್ಪವಾಗಿ ಭೂಲಕ್ಷ್ಮೀದೇವಿಯನ್ನು ಕಚ್ಚುತ್ತಾನೆ. ಭೂಲಕ್ಷ್ಮೀದೇವಿ ಪ್ರಾಣವನ್ನು ತೆಗೆದುಕೊಂಡು ಹೋಗುತ್ತಾನೆ ನಾಗರಾಜ. ಅಂದರೆ ಇಲ್ಲಿ ಹೆಣ್ಣು ಕೊಟ್ಟ ಭಾಷೆಗೆ ತಪ್ಪುವುದಿಲ್ಲ.

ಉದಾಹರಣೆಗೆ ನಾವು ಪುಣ್ಯಕೋಟಿ ಕಥೆಯಲ್ಲಿ ಹಸುವು ತನ್ನ ಮಾತಿನಂತೆ ಹುಲಿಗೆ ಆಹಾರವಾಗಲು ಹೋಗುವಂತಹ ಸಂದರ್ಭವನ್ನು ಕಾಣಬಹುದು. ಅದರಂತೆ ಈ ಬಾಲ ನಾಗಮ್ಮನ ಕಾವ್ಯದಲ್ಲಿ ಸ್ತ್ರೀಯಾದವಳು ಭೂಲಕ್ಷ್ಮೀದೇವಿ ನಾಗರಾಜನಿಗೆ ಮಕ್ಕಳ ಪಡೆದದ್ದರಿಂದ ತನ್ನ ಪ್ರಾಣವನ್ನೇ ಅರ್ಪಿಸುವಂತಹದ್ದನ್ನು ಈ ಕಾವ್ಯ ಭಾಗದಲ್ಲಿ ಕಾಣಬಹುದಾಗಿದೆ.

**೪.೩. ನಾಗಮ್ಮನಿಗೆ ಮಲತಾಯಿ ನೀಡುವಂತಹ ಕಷ್ಟಗಳು**

ಏಳು ಜನ ಮಕ್ಕಳಿಗೆ ಎಂಟೆಂಬೊ ವರುಷ ಆಯ್ತು
ಒಂಬತ್ತೆ ವರುಷವು ತುಂಬಿತು ಮಕ್ಕಳಿಗೆ
ಕೆಲಸವಾದರೆ ಕಲಿಸಬೇಕು ಎನ್ನುತ ಮಕ್ಕಳ ಮೇಲೆ ತಿರುಗ್ಯಾಳೆ
ಕೆಲಸವಾದರೆ ಕಲಿಸಬೇಕು ಒಂಬತ್ತು ವರ್ಷ ತುಂಬಿತು
ಮನದಲ್ಲಿ ಯೋಚನೆ ಮಾಡಿಕೊಂಡು ಗಂಡನನ್ನು ಕೇಳುತಾಳೆ
ಏನಾದರು ಕಲಿಸೋಗು ಬುದ್ಧಿಯನಾದರು ಹೇಳು ಹೋಗು
ಗಂಡನಿಂದ ಅಪ್ಪಣೆ ಪಡೆದು ಹೊರಟಳಲ್ಲ ಮಹಾರಾಣಿ

ಏಳು ಜನ ಮಕ್ಕಳಿಗೆ ಏಳು ಬಿಂದಿಗೆ ಮಾಡಿಸ್ಯಾಳೆ
ಬನ್ನಿರೆ ಸವತಿ ಮಕ್ಕಳಿರ ಓಡೋಡಿ ಬನ್ನಿರೆ ನೀವೀಗ
ಒಂಬತ್ತು ವರ್ಷ ಆಯಿತು ನಿಮಗೆ ಯಾವ ಕೆಲಸವು ಕಲಿಲಿಲ್ಲ
ಕೊಟ್ಟ ಮನೆಯಲಿ ನಮ್ಮನಾದರು ಹೊಗಳುತಾರೆ ಕೇಳೀರಿ
ಮಕ್ಕಳಿಗೆ ಬುದ್ಧಿ ಹೇಳುತಾಳೆ ಬಿಂದಿಗೆ ಕೈಗೆ ಕೊಡುತಾಳೆ
ಎಂದೂ ಒಂದು ಗಡಿಗೆಯ ನೀರು ಸೇದಿದಂಥ ಮಕ್ಕಳಲ್ಲ
ಏಳು ಬಿಂದಿಗೆ ಕೊಡುತಾಳೆ ಹುಣಸೆ ಬರಲ ಕಟ್ಟುತಾಳೆ
ಒಂದು ನಿಮಿಷ ಕುಂಡಿರದಂತೆ ಕೆಲಸ ಅವರಿಗೆ ಕೊಡುತಾಳೆ
ತಾಯಿ ಸತ್ತ ತಬ್ಬಲಿ ಮಕ್ಕಳು ಏಲು ಜನ ಹೆಣ್ಣು ಮಕ್ಕಳು
ಬಾಳ ದುಃಖ ಮಾಡುತಾರೆ ಕೈಯಲಿ ಬೊಬ್ಬೆ ಆಗ್ಯೆತೆ
ತಾಯಿ ಸತ್ತ ತಬ್ಬಲಿ ಮಕ್ಕಳಿಗೆ ಏನು ಕಷ್ಟ ಬಂತಯ್ಯ
ತಂದೆಯಾದ ನವಭೋಜನಿಗೆ ಮಕ್ಕಳ ಮೇಲೆ ಪ್ರೀತಿಯಿಲ್ಲ
ಮಡದಿ ಮೇಲೆ ಬಲುಪ್ರೀತಿ ಮಕ್ಕಳ ಮೇಲೆ ಆಸೆಯಿಲ್ಲ
ಆರು ಜನಕೆ ಕಿರಿಯೋಳು ಬಾಲನಾಗಮ್ಮ ತಾನಾಗ
ತಾಯಿಗೆದುರುತ್ತ ಕೊಡುತಾಳೆ ಆ ಹೊತ್ತಿನ ದಿನದೊಳಗೆ
ಯಾವ ಕೆಲಸ ಕೊಟ್ಟರು ಕೊಡು ಕಾಲಕೆ ತಕ್ಕನಾದ ಊಟವ
ಕಾಲಕೆ ತಕ್ಕನಾದ ಊಟವ ಕೊಡಬೇಕೆಂದು ಹೇಳುತಾಳೆ
ಅಂತಪ್ಪ ಮಾತ ಕೇಳುತಾಳೆ ಮಾರಾಣಿಯಾದ ಕಾಮಿನಿಯು
ಇವಳ ರೂಪುರೇಖೆಯ ನೋಡುತಾಳೆ ಬಹಳ ಕನಿಕರವ ಪಡುತಾಳೆ
ಗಂಡನಾದ ನವಭೋಜನಿಗೆ ಬೇರೆ ನಾಡ ರಾಜನಿಂದ
ಓಲೆಯಾದರು ಬರುತ್ಯೆತೆ ಅಯ್ಯ ಹೊರಡುತಾನೆ ನವಭೋಜ
ಏಳುಜನ ಮಕ್ಕಳನ್ನು ಕರೆದೊಂದು ಬುದ್ದಿಯ ಹೇಳುತಾನೆ
ಅಮ್ಮ ಕೇಳಿ ನನ್ನ ಹೆಣ್ಣು ಮಕ್ಕಳೆ ನಾವೂರ ಬಿಟ್ಟು ಹೋಗುತೀನಿ
ತಾಯಿಗುತ್ತರ ಕೊಡಬೇಡಿ ಏನು ಜಗಳ ಮಾಡಬೇಡಿ
ಮಕ್ಕಳಿಗೆ ಬುದ್ಧಿಯ ಹೇಳಿ ಹೊರಟುಹೋದ ನವಭೋಜ

ಅಯ್ಯ ಏಳು ಜನ ಮಕ್ಕಳು ಹಗಲು ರಾತ್ರಿಯೆನ್ನದೆ
ಕೆಲಸನಾದರೆ ಮಾಡುತಾರೆ ಇಂತಪ್ಪ ಮಕ್ಕಳು
ಮಕ್ಕಳ ನೋಡಿ ಕಾಮಿನಿ ಒಂದು ದಿವಸಕೆ ಒಂದು ಊಟ
ಒಂದು ದಿವಸಕೆ ಒಂದು ಊಟ ಕೊಡಬೇಕು ತಾನಂದುಕೊಂಡು
ಕಗ್ಗಲರಾಗಿ ಮುದ್ದೆಯು ಮುಗ್ಗಲು ಹುಳಿಯ ಸಾರಯ್ಯ
ಏಳುಜನ ಮಕ್ಕಳಿಗೆ ತಾಯಿಯ ಮೇಲೆ ಜ್ಞಾಪಕವು
ಆರು ಜನಕೆ ಹಿರಿಯೋಳೆ ಹಿರಿಯ ನಾಗಮ್ಮನಾದರೆ
ಅಮ್ಮ ನಮ್ಮ ತಾಯಿ ನಮಗಿದ್ದರೆ ಇಂತಹ ಕೆಲಸ ಕೊಡುತಿದ್ಲ
ಅಮ್ಮ ತಲೆಗೆ ಎಣ್ಣೆ ಇಲ್ಲವಲ್ಲೆ ಮೈಗೆ ನೀರೆ ಇಲ್ಲವಲ್ಲೆ
ಒಬ್ಬರ ಕೊಳ್ಳ ಒಬ್ಬರು ತಬ್ಬಿ ಧರಣಿ ಶೋಕ ಮಾಡುತಾರೆ
ತಾಯಿಯಾದ ಭೂಲಕ್ಷ್ಮಿದೇವಿಯ ಬೇಡುತಾರೆ ಆವಾಗ
ಅಯ್ಯ ಏಳು ಜನ ಮಕ್ಕಳಿಗೆ ಕಾಣಿಸಿಕೊಂಡಳು ಭೂಲಕ್ಷ್ಮಿ
ಅಮ್ಮ ಹೊಟ್ಟೆಗನ್ನವಿಲ್ಲದೆ ನೀವು ಕೊರಗಬೇಡಿರಿ
ಎಂದು ಬಾಳೆ ಮರವಾಗಿ ಹುಟ್ಟುತಾಳೆ ಭೂಲಕ್ಷ್ಮಿ
ಅಮ್ಮ ದಿನಕೊಂದೆ ಬಾಳೆಹಣ್ಣ ಒಬ್ಬೊಬ್ಬರ ತಿನ್ನಿರಮ್ಮ
ಅಮ್ಮ ನಿಮ್ಮ ಬಲತಾಯಿಗೆ ಈ ಮಾತ ಹೇಳಬೇಡಿ ಕಂಡಿರ
ತಾಯಿಮಾತ ಹೇಳವ್ಳೆ ಮಾಯವಾಗಿ ಹೋಗವ್ಳೆ
ಅಯ್ಯ ಬೆಳಗಿನ ಮೂರು ಗಂಟೆವೇಳೆ ಬಲತಾಯಿಯು ಬರುತಾಳೆ
ಕಗ್ಗಲರಾಗಿ ಮುದ್ದೆಯನ್ನು ಮುಗ್ಗಲ ಹುರುಳಿ ಸಾರನ್ನು
ತಕ್ಕೊಂಡಾದರೆ ಬರುತಾಳೆ ಉದ್ಯಾನವನಕೆ ತಾ ಬೇಗ
ಬಾವಿಕಲ್ಲಿನಮೇಲಿಟ್ಟು ಬನ್ನಿರೆ ಸವತಿ ಮಕ್ಕಳೆ
ಎನ್ನುತ ಆಗ ಕರೆದಾಳೆ ರಾಣಿಯಾದ ಕಾಮಿನಿಯು
ಆವೊತ್ತ ಒಬ್ಬರಿಗು ಹಸಿವಿಲ್ಲ ಬಾಳೆಯ ಹಣ್ಣ ತಿಂದವ್ರೆ
ನಿತ್ಯ ಕಾಯಕ ಮಾಡುತಾರೆ ಏಳುಜನ ಹೆಣ್ಣುಮಕ್ಕಳು
ಒಂದು ವಾರವಾಯಿತಯ್ಯ ತಂದೆ ಬರುವ ವೇಳೆಯಾಯ್ತು

ತಾಯಿಯಾದ ಬಲತಾಯಿ ಮಹಡಿಮೇಲೆ ನಿಂತುಕೊಂಡು
ಏಳು ಮಾಡಿಯ ಮೇಲೆ ನಿಂತು ನೋಡುತಾಳೆ ಬಲತಾಯಿ
ನನ್ನ ಸವತಿ ಮಕ್ಕಳಿಗೆ ಯಾವ ಊಟ ಕೊಟ್ಟರು
ದಿನದಿನಕೆ ರೂಪು ಮಾತ್ರ ಬಹಳವಾಗಿ ಬರುತೈತೆ
ಕಗ್ಗಲರಾಗಿ ಮುದ್ದೆ ಕೊಟ್ಟೆ ಮುಗ್ಗಲ ಹುರುಳಿ ಸಾರ ಕೊಟ್ಟೆ
ಆಗ ಏಳುಜನ ಹೆಣ್ಣು ಮಕ್ಕಳು ಸುಮ್ಮನಾದರೆ ಕುಂತುಕೊಂಡು
ಒಬ್ಬೊಬ್ಬರು ಒಂದೊಂದು ಬಾಳೆಯ ಹಣ್ಣ ತಿನ್ನುತಾರೆ
ಏಳು ಮಾಡಿಯ ಮೇಲೆ ನಿಂತು ನೊಡುತಾಳೆ ಬಲತಾಯಿ
ಅಲ್ಲಿಗೆ ಯಾರು ಬಂದೋರು ಬಾಳೆಯ ಹಣ್ಣು ಕೊಟ್ಟವರ್ಯಾರು
ಎಂದು ಮನದಲಿ ಕಳವಳವು ಬರುತಾಲೈತೆ ಕಾಮಿನಿಗೆ
ಅಯ್ಯ ದಾದಿಯನ್ನೆ ಕರಕೊಂಡ್ಲು ಬರುತಾಲವಳೆ ವನಕೀಗ
ನನ್ನ ಸವತಿ ಮಕ್ಕಳೆ ಯಾರು ಕೊಟ್ಟರು ಈ ಹಣ್ಣ
ಏಳು ಜನದ ಮಕ್ಕಳು ಮಾತನಾಡದೆ ನಿಂತುಕೊಂಡ್ರು
ಏಳುಜನದ ಜಡೆಯನ್ನು ಹಿಡಕೊಂಡಾಳು ಬಲತಾಯಿ
ಹುಣಸೆಬರಲಲಿ ಹೊಡೆದಾಳು ರಾಣಿಯಾದ ಬಲತಾಯಿ
ಹುಣಸೆಬರಲ ಹೊಡೆತಾವ ತಡೆಯಲಾರದೆ ಮಕ್ಕಳು
ಆರುಜನಕೆ ಕಿರಿಯೋಳು ಬಾಲನಾಗಮ್ಮ ಏನನ್ನುತಾಳೆ
ಅಮ್ಮ ಹೊಡಿಯಬೇಡ ಬಯ್ಯಬೇಡ ಹೇಳಿದಂಗೆ ಕೇಳುತೀವಿ
ಆಗ ಇಲ್ಲಿಗ್ಯಾರೆ ಬಂದೋರು ಹಣ್ಣನ್ಯಾರೆ ಕೊಟ್ಟೋರು
ಅಮ್ಮ ಕೇಳು ಕೇಳು ಬಲತಾಯಿ ಹೇಳುವಂತ ನಮ್ಮ ಮಾತ
ನಮ್ಮ ಉದ್ಯಾನವನದಲ್ಲಿ ಒಂದು ಬಾಳೇಮರವೈತೆ
ಅಮ್ಮ ಒಂದು ಬಾಳೆಯ ಮರಕೀಗ ಏಳುಗೊನೆಯೆ ಬಿಟ್ಟಾವೆ
ಅಮ್ಮ ದಿನಕ್ಕೊಂದು ಹಣ್ಣು ತಿಂದರೆ ಹಸಿವೆ ನಮಗಾಗೋದಿಲ್ಲ
ಮಾತು ಕೇಳಿ ಮಹಾರಾಣಿ ಬಲತಾಯಿ

ಅಮ್ಮ ನಡಿಯಿರಮ್ಮ ನೋಡಬೇಕು ಬಾಳೆಮರವ ತೋರಿರೆಂದು
ಕರೆದುಕೊಂಡು ಹೋಗುತಾಳೆ ಬಾಳೆಮರವ ನೋಡುತಾಳೆ
ಏಳುಬಾಳೆ ಕಾಯನಾದರು ಮರಿದುಕೊಂಡ್ಲಿ ಮಹಾರಾಣಿ
ಅರಮನೆಯ ಪಂಡಿತರನ ಬಳಿಗಾದರೆ ಹೋಗುತಾಳೆ
ಸ್ವಾಮಿ ಕೇಳಿ ಪಂಡಿತರೆ ಹೇಳುವಂತ ನಮ್ಮ ಮಾತ
ನಮ್ಮ ಉದ್ಯಾನವನದಲ್ಲಿ ಒಂದು ಬಾಳೆ ಮರವುಂಟು
ಸ್ವಾಮಿ ನಾಳೆ ಹನ್ನೆರಡು ಗಂಟೆಗಾದರೆ ನನ್ನ ಗಂಡ ಬರುತಾನೆ
ಇಲ್ಲದ ಮಾತು ಹೇಳಬೇಕು ಬಾಳೆಮರವ ಕಡಿಸಬೇಕು
ಬಾಳೆಮರವೆ ಕಡಿಸೊದಾದರೆ ತಕೊಳ್ಳಿ ಒಂದು ಬಿಂದಿಗೆ ಹಣವ
ಒಂದು ಬಿಂದಿಗೆ ಹಣವ ಕೊಟ್ಟು ನಿಂತುಕೊಂಡಳು ಮಹಾರಾಣಿ
ಅಮ್ಮ ನಾ ಹೇಳಿದಂತೆ ಕೇಳಬೇಕು ನಿನ್ನ ಗಂಡ ಬರೋಷೊತ್ತಿಗೆ
ಸ್ವಾಮಿ ಏನುಮಾತು ಬೇಕಾದರು ಕೇಳುತೀನಿ ಅನ್ನುತಾಳೆ
ಅಮ್ಮ ನಿನ್ನ ಗಂಡ ಬರೋಹೊತ್ತ ಮನೆಯಲ್ಲಿ ನೀನಾದರೆ
ಹೊಟ್ಟೆದಾದಿಯೆನ್ನುತಲಿ ಮಲಗಿಬಿಡು ಮನೆಯಲ್ಲಿ
ನಿನ್ನ ಗಂಡ ಓಡಿಬಂದು ಶಾಸ್ತ್ರವನ್ನು ಕೇಳುತಾನೆ
ಶಾಸ್ತ್ರವನೆ ಕೇಳುತಾನೆ ನಿನಗೆ ಒಳ್ಳೆಯದಾಗುತ್ತೈತಿ
ಮೂರು ಮಾತ ಕೇಳಿಕೊಂಡು ಮನೆಗಾದರೆ ಬರುತಾಳೆ
ಆಗ ಗಂಡನಾದ ನವಭೋಜ ಮನೆಗಾದರೆ ಬರುತಾನೆ
ಹೊಟ್ಟೆಬಾದಿ ಎಂದುಬಿಟ್ಟು ಮನೆಯಲ್ಲೆಲ್ಲ ಉರುಳುತಾಳೆ
ಗಂಡನಾದ ನವಭೋಜನಿಗೆ ಬಹಳ ಭಯವೆ ಆಗುತದೆ
ಹೋಗಿಹೋಗಿ ಶಾಸ್ತ್ರ ಕೇಳಿ ನಾನು ಬದುಕೊ ದಾರಿಯಿಲ್ಲ
ಒಂದು ಬಿಂದಿಗೆ ಹಣವ ಹೊತ್ತು ಓಡಿ ಓಡಿ ಹೋಗುತಾನೆ
ತನ್ನ ಹೆಂಡತಿ ಉಳಿಸಿಕೊಡಿ ಒಂದು ಬಿಂದಿಗೆ ಹಣವ ಕೊಳ್ಳಿ
ಒಂದು ಬಿಂದಿಗೆ ಹಣವ ಕೊಂಡು ಪಂಡಿತರು ಹೇಳುತಾರೆ
ಅಯ್ಯ ಸುಳ್ಳುಪಳ್ಳಿನ ಪಂಚಾಂಗ ತೆಗೆದುಕೊಂಡೆ ಹೇಳುತಾರೆ

ಅಯ್ಯ ಕೇಳು ಕೇಳು ಮಹಾರಾಜ ಹೇಳುವಂತ ನನ್ನ ಮಾತ
ಅಯ್ಯ ನಿನ್ನ ಉದ್ಯಾನವನದಲ್ಲಿ ಒಂದು ಬಾಳೆಯ ಮರವು ಉಂಟು
ಬಾಳೆಮರವ ಕಡಿಸಬೇಕು ಕಾಯಿಲೆವಾಸಿ ಆಗುತೈತೆ
ಅಂತಪ್ಪ ಮಾತ ಕೇಳಿ ಮಹಾರಾಜ ಹಿಂದಿರುಗಿ ಮನೆಗೆ ಬಂದ
ಆಳುಗಳನ್ನು ಕರೆಸಿಕೊಂಡು ಉದ್ಯಾನವನಕೆ ಹೊರಟನಾಗ
ಬಾಳೆಮರವ ಕಡಿಸಬೇಕು ಅಂತಬಂದು ನಿಂತುಕೊಂಡ
ಏಳುಜನ ಹೆಣ್ಣುಮಕ್ಕಳು ಓಡಿ ಓಡಿ ಬರುತಾರೆ
ತಂದೆಕೇಳು ನಮ್ಮ ಜನಕ ಬಾಳೆಮರವ ಕಡಿಸಬೇಡ
ಬಾಳೆಹಣ್ಣ ತಿಂದು ನಾವು ಕಾಲಹರಣ ಮಾಡುತಿದ್ದೊ
ಎಂದು ಹೇಳಿ ಹೆಣ್ಣು ಮಕ್ಕಳು ತಂದೆಯನ್ನು ಬೇಡುತಾರೆ
ಎಷ್ಟು ಬೇಡಿದರು ಕೇಳಲಿಲ್ಲ ಮರವನಾದರೆ ಕಡಿಸುತಾನೆ
ಬಾಳೆಮರವ ಕಡಿಸುತಾನೆ ಹೊಟ್ಟೆಬಾದಿ ವಾಸಿಯಾಯ್ತು.

ನವಭೋಜರಾಜ ಮಡದಿಯನ್ನು ಕಳೆದುಕೊಂಡು ಮಕ್ಕಳನ್ನು ಸಾಕುತ್ತಿರುತ್ತಾನೆ. ಅದೇ ಸಮಯಕ್ಕೆ ಮಂತ್ರಿ ಬಂದು ಸ್ವಾಮಿ ನೀವು ಮತ್ತೆ ಮರುಮದುವೆಯಾಗಬೇಕು. ನಿಮಗೆ ಮಕ್ಕಳನ್ನು ಸಾಕಕಾಗೋದಿಲ್ಲ. ಆಗ ನವಭೋಜರಾಜ ಭೂಲಕ್ಷ್ಮೀದೇವಿಗೆ ಭಾಷೆ ಕೊಟ್ಟಿರುವುದಾಗಿ ಹೇಳುತ್ತಾನೆ. ಅಂದರೆ ನಾನು ಮತ್ತೆ ಮರುಮದುವೆ ಆಗುವುದಿಲ್ಲ. ಮಕ್ಕಳನ್ನು ಚೆನ್ನಾಗಿ ನೋಡಿಕೊಳ್ಳುತ್ತೇನೆ ಎನ್ನುವಂತ ಭಾಷೆಯನ್ನು ಕೊಟ್ಟಿರುತ್ತಾನೆ. ಅದಕ್ಕೆ ಇಲ್ಲ ಆಗುವುದಿಲ್ಲ ಎನ್ನುತ್ತಾನೆ. ತಾಯಿ ಸತ್ತು ಒಂದು ತಿಂಗಳಾದರೂ ಮಕ್ಕಳನ್ನು ಯಾರ ಕೈಗೆ ಕೊಡದಂತೆ ತಾನೇ ಸಾಕುತ್ತಾನೆ. ಒಂದು ದಿವಸ ಮಂತ್ರಿ ರಾಜನ ಹತ್ತಿರ ಬಂದು ಮಕ್ಕಳನ್ನು ನೋಡುತ್ತಾನೆ. ಮಕ್ಕಳನ್ನು ಚೆನ್ನಾಗಿ ಶೃಂಗಾರ ಮಾಡಿಲ್ಲ, ಅವರ ತಲೆಯಲ್ಲಿ ಹೂಗಳೇ ಇಲ್ಲ ಎಂದಾಗ ರಾಜ ಮರೆತು ಬಂದೆ ಗೂಡಲ್ಲಿದೆ ತರುತ್ತೇನೆ. ಮಕ್ಕಳನ್ನು ನೋಡಿಕೋ ಎಂದು ಹೇಳಿ ಹೋದ. ಆಗ ಮಂತ್ರಿ ಮಕ್ಕಳಿಗೆ ಈ ರೀತಿ ಹೇಳುತ್ತಾನೆ. ಆಡುತ್ತಿರುವ ಮಕ್ಕಳನ್ನು ಹತ್ತಿರಕ್ಕೆ ಕರೆದು ಅಮ್ಮ ಕೇಳಿ ನೀವು ತಾಯಿ ಸತ್ತ ತಬ್ಬಲಿಗಳಮ್ಮ. ಅಮ್ಮ ನಿಮ್ಮ ತಂದೆ ಎಷ್ಟು ಕೇಳಿದರು ಮರುಮದುವೆ ಆಗಲಿಕ್ಕೆ ಒಪ್ಪುತ್ತಿಲ್ಲ. ನೀವಾದರೂ ನಿಮ್ಮ ತಂದೆಯನ್ನು ಮದುವೆಗೆ ಒಪ್ಪಿಸಿರಮ್ಮ. ನೀವು ಸುಖವಾಗಿರಬಹುದು. ನಿಮ್ಮ ತಂದೆಯು ಸುಖವಾಗಿರಬಹುದು ಎಂದು ಹೇಳುತ್ತಾನೆ. ಈ ಮಾತನ್ನು ಕೇಳಿದಂತಹ ಮಕ್ಕಳು ತಂದೆ

ಹೂ ತೆಗೆದುಕೊಂಡು ಬಂದ ನಂತರ ಮಕ್ಕಳನ್ನು ಕರೆಯುತ್ತಾನೆ. ಆಗ ಏಳು ಜನ ಹೆಣ್ಣುಮಕ್ಕಳು ಒಬ್ಬರು ಬರಲಿಲ್ಲ. ಆಗ ಕಿರಿಯ ಮಗಳು ಬಾಲನಾಗಮ್ಮ ತಂದೆ ನಮದೊಂದು ಮಾತು ನಡೆಸಿಕೊಟ್ಟರೆ, ನಾವು ಹೂ ಮುಡಿಯುತ್ತೇವೆ ಎಂದಳು. ಆ ಮಾತಿಗೆ ನವಭೋಜರಾಜ ಒಪ್ಪಿಕೊಂಡ. ಯಾವ ಮಾತು ಕೇಳಮ್ಮ ನಡೆಸಿಕೊಡುತ್ತೇನೆ ಎಂದ. ಆಗ ಬಾಲನಾಗಮ್ಮ ತಂದೆಗೆ ನೀವು ಬೇರೆ ಮದುವೆಯಾಗಬೇಕು ಎಂದು ಹೇಳಿದಳೂ. ಅದಕ್ಕೆ ಮಗಳಿಗೆ ಕೊಟ್ಟ ಭಾಷೆಯಂತೆ ಮರುಮದುವೆಯಾಗಲು ನವಭೋಜರಾಜ ಒಪ್ಪಿಕೊಂಡ.

ನವಭೋಜರಾಜ ಕಾಮರಾಜನ ಮಗಳಾದ ಕಾಮಿನಿ ಎನ್ನುವಂತ ಹೆಣ್ಣು ಮಗಳನ್ನು ಮರುಮದುವೆ ಮಾಡಿಕೊಳ್ಳುತ್ತಾನೆ. ಮದುವೆ ಮಾಡಿಕೊಂಡು ಬಂದ ಕಾಮಿನಿ ಸ್ವಲ್ಪ ದಿನಗಳ ಕಾಲ ಚೆನ್ನಾಗಿ ನೋಡಿಕೊಳ್ಳುತ್ತಾಳೆ. ಏಳು ಜನ ಮಕ್ಕಳನ್ನು ಸಾಕುತ್ತಿರುತ್ತಾಳೆ. ಆಗ ನಂತರ ಕಾಮಿನಿಯ ಮೇಲೆ ನವಭೋಜರಾನಿಗೆ ಆಸೆಯಿಲ್ಲ, ಇದನ್ನು ಅರಿತ ಕಾಮಿನಿಯು ಅರಮನೆಯ ದಾದಿಯರ ಹತ್ತಿರ ಹೇಳಿಕೊಳ್ಳುತ್ತಾಳೆ. ಆಗ ದಾದಿಯರು ತವರು ಮನೆಗೆ ಹೋಗಮ್ಮ ಹೋಗಿ ರಾಜನಿಗೆ ಮದ್ದು ತಂದು ಕೊಡಿಸಮ್ಮ. ಅದನ್ನ ಅನ್ನದಲ್ಲಿ ಸೇರಿಸಿ ನಿನ್ನ ಪತಿಗೆ ಕೊಡಮ್ಮ ಎನ್ನುತ್ತಾರೆ. ಇದನ್ನರಿತ ಕಾಮಿನಿ ನವಭೋಜರಾಜನ ಬಳೀಗೆ ಬಂದು ಸ್ವಾಮಿ ನಾನು ತವರು ಮನೆಗೆ ಹೋಗುತ್ತೀನಿ. ನನಗೆ ತಂದೆ ತಾಯಿ ನೆನಪಾಗುತ್ತಿದೆ ಎಂದು ಹೇಳಿ, ತವರು ಮನೆಗೆ ಹೋಗುತ್ತಾಳೆ. ಹೋಗಿ ತಾಯಿಗೆ ಹೇಳಿ ಪತಿಗೆ ಮದ್ದು ತೆಗೆದುಕೊಂಡು ಬಂದು ಅನ್ನದಲ್ಲಿ ಸೇರಿಸಿ ಪತಿಗೆ ಊಟಕ್ಕೆ ಕೊಡುತ್ತಾಳೆ. ಆಗ ನವಭೋಜರಾಜನಿಗೆ ಮಕ್ಕಳ ಮೇಲಿರುವ ಪ್ರೀತಿ ಕಡಿಮೆಯಾಗುತ್ತಾ ಮಡದಿ ಕಾಮಿನಿಯ ಮೇಲೆ ಪ್ರೀತಿ ಜಾಸ್ತಿಯಾಗುತ್ತದೆ. ಆಗ ಮಕ್ಕಳಿಗೆ ಎಂಟು ವರ್ಷ ತುಂಬಿತು, ಒಂಭತ್ತನೆ ವರ್ಷ ತುಂಬಿತು. ಮಕ್ಕಳಿಗೆ ಕೆಲಸವಾದರೂ ಕಲಿಸಬೇಕು ಎನ್ನುತ ಕಾಮಿನಿ ಹೇಳುತ್ತಾಳೆ. ಆಗ ಗಂಡ ಮಾತಿಗೆ ಒಪ್ಪಿಕೊಂಡ. ಪತಿಯ ಮಾತಿನ ಅಪ್ಪಣೆ ಪಡೆದು, ಕಾಮಿನಿ ಏಳು ಜನ ಮಕ್ಕಳೀಗೆ ಏಳು ಬಿಂದಿಗೆ ಮಾಡಿಸ್ಯಾಳೆ, ಏಳು ಬಿಂದಿಗೆ ಮಾಡಿಸಿ ಬನ್ನಿರೆ ಸವತಿ ಮಕ್ಕಳೆ ಒಂಬತ್ತು ವರ್ಷ ಆಯಿತು. ನೀವು ಯಾವ ಕೆಲಸ ಕಲಿಯಲಿಲ್ಲ ಎಂದು ಹೇಳುತ್ತಾಳೆ. ಆ ಏಳು ಜನ ಮಕ್ಕಳು ಕೈಯಲ್ಲಿ ಏಳು ಬಿಂದಿಗೆ ಕೊಟ್ಟು ನೀರಿಗೆ ಕಳಿಸುತ್ತಾಳೆ. ಆ ಮಕ್ಕಳು ಒಂದು ಬಿಂದಿಗೆ ನೀರನ್ನು ಸೇದಿದಂಥ ಮಕ್ಕಳಲ್ಲ. ಅವರುಗಳಿಗೆ ಹುಣಸೆ ಬರಲಿನಿಂದ ಹೊಡೆಯುತ್ತಾಳೆ. ಆ ಮಕ್ಕಳಿಗೆ ಒಂದು ನಿಮಿಷ ಕುಳಿತುಕೊಳ್ಳದಂತೆ ಕೆಲಸವನ್ನು ಕೊಡುತ್ತಾಳೆ. ತಾಯಿ ಸತ್ತ ಮಕ್ಕಳು, ಏಳು ಜನ ಮಕ್ಕಳ ಕೈಯಲ್ಲಿ ಬೊಬ್ಬೆಗಳು ಆಗುತ್ತವೆ. ಮಲತಾಯಿ ಮಕ್ಕಳಿಗೆ ಕಷ್ಟ ಕೊಡುತ್ತಾಳೆ.

ತಂದೆ ನವಭೋಜರಾಜನಿಗೆ ಮಕ್ಕಳ ಮೇಲೆ ಪ್ರೀತಿ ಇಲ್ಲದಂತೆ ಆಗುತ್ತೆ. ಮಕ್ಕಳಲ್ಲಿ ಕಿರಿಯವಳಾದ ಬಾಲನಾಗಮ್ಮ ತಾಯಿಗೆ ಎದುರು ಉತ್ತರ ಕೊಡುತ್ತಾಳೆ. ಅದೇನೆಂದರೆ ನಮಗೆ ಕೆಲಸ ಕೊಡಮ್ಮ, ಅದಕ್ಕೆ ತಕ್ಕಂತೆ ನಮಗೆ ಊಟ ಕೊಡಮ್ಮ ಎಂದು ಹೇಳುತ್ತಾಳೆ. ಈ ಮಾತನ್ನು ಕೇಳಿದ ಕಾಮಿನಿಯು..........

ಆಗ ನವಭೋಜರಾಜನಿಗೆ ಬೇರೆ ರಾಜನ ರಾಜ್ಯದಿಂದ ಓಲೆ ಬರುತ್ತದೆ. ಆಗ ನವಭೋಜರಾಜ ಅಲ್ಲಿಗೆ ಹೋಗುತ್ತಾನೆ. ಹೋಗುವ ಮುಂಚೆ ಏಳು ಜನ ಮಕ್ಕಳನ್ನು ಕರೆದು ನಿಮ್ಮ ತಾಯಿಗೆ ಎದುರು ಉತ್ತರ ಕೊಡಬೇಡಿ, ಜಗಳ ಮಾಡಬೇಡಿ ಎಂದು ಹೇಳಿ ಹೊರಟು ಹೋದ. ಆದರೆ ಇಲ್ಲಿ ಪುರುಷ ಪ್ರಧಾನ ವ್ಯವಸ್ಥೆ. ಇಲ್ಲಿ ಹೆಣ್ಣನ್ನು ಮಾತ್ರ ಪ್ರತಿನಿಧಿಸುತ್ತಾ ಹೋಗುವಂತಹದ್ದು ಯಾಕೆಂದರೆ ಇಲ್ಲಿ ಪುರುಷನಿಗೆ ಅಂತಹ ಅಧಿಕಾರ ಇದ್ದರೂ ಕೂಡ ಅದನ್ನು ಇಲ್ಲಿ ಸೂಚಿಸುವುದಿಲ್ಲ. ಅಂದರೆ ಇಲ್ಲಿ ನವಭೋಜರಾಜ ತನ್ನ ಮಡದಿಗೆ ಹೇಳುವಂತಹ ಅಧಿಕಾರ ಇದ್ದರೂ ಕೂಡ ಇಲ್ಲಿ ಅಂತಹ ಸಂದರ್ಭಗಳೂ ಯಾವುದೂ ಕಂಡುಬರುವುದಿಲ್ಲ. ನವಭೋಜರಾಜ ಮಡದಿಗೆ ಹೇಳದೆ, ಮಕ್ಕಳಿಗೆ ಹೇಳಿ ಹೋಗುತ್ತಾನೆ. ಅಂದರೆ ಇದರರ್ಥ ಇಲ್ಲಿ ಸ್ತ್ರೀಯನ್ನೇ ಗುರುತಿಸುವ ಕೆಲಸವನ್ನು ಮಾಡಿದ್ದಾರೆ ಎಂದೆನ್ನಬಹುದು.

ಕಾಮಿನಿ ತನ್ನ ಮಲತಾಯಿ ಧೋರಣೆಯನ್ನು ಬಿಡುವುದೇ ಇಲ್ಲ. ಏಳು ಜನ ಮಕ್ಕಳಿಗೆ ಹಗಲು-ರಾತ್ರಿ ಎನ್ನದೇ ಕೆಲಸವನ್ನು ಕೊಡುತ್ತಾಳೆ. ಆ ಏಳು ಜನ ಮಕ್ಕಳು ಹಗಲು ರಾತ್ರಿ ಎನ್ನದೆ ಕೆಲಸವನ್ನು ಮಾಡುತ್ತಿರುತ್ತವೆ. ಒಂದು ದಿನ ಮಕ್ಕಳನ್ನು ನೋಡಿದ ಕಾಮಿನಿ ಮಕ್ಕಳಿಗೆ ಒಂದು ದಿವಸಕ್ಕೆ ಊಟ, ಕೆಲಸಕ್ಕೆ ಬಾರದ ರಾಗಿ ಮುದ್ದೆ, ಕೆಟ್ಟು ಹೋದ ರಾಗಿಮುದ್ದೆ ಮತ್ತು ಹುರುಳಿಯ ಸಾರನ್ನು ಏಳು ಜನ ಮಕ್ಕಳಿಗೆ ಕೊಡುತ್ತಾಳೆ. ಇದನ್ನು ನೋಡಿದ ಏಳು ಜನ ಮಕ್ಕಳಿಗೆ ತಮ್ಮ ಹೆತ್ತ ತಾಯಿಯ ನೆನಪು ಆಗುತ್ತದೆ. ಆಗ ತಮ್ಮ ತಾಯಿಯನ್ನು ನೆನಸಿಕೊಂಡು ಎಲ್ಲರೂ ತಮ್ಮ ತಾಯಿ ಇದ್ದಿದ್ದರೆ ನಮಗೆ ಇಂತಹ ಕೆಲಸವನ್ನು ಕೊಡುತ್ತಿದ್ದ್ಲ, ಅಮ್ಮ ತಲೆಗೆ ಎಣ್ಣೆಯಿಲ್ಲ, ಮೈಗೆ ನೀರೆ ಇಲ್ಲ ಎಂದು ಏಳು ಜನ ಒಬ್ಬರಿಗೊಬ್ಬರು ತಬ್ಬಿಕೊಂಡು ದುಃಖಪಡುತ್ತಿರುತ್ತಾರೆ. ನಂತರ ತಾಯಿಯಾದ ಭೂಲಕ್ಷ್ಮೀದೇವಿಯನ್ನು ಬೇಡುತ್ತಾರೆ. ಆಗ ಭೂಲಕ್ಷ್ಮೀದೇವಿ ಏಳು ಜನ ಮಕ್ಕಳಿಗೆ ಕಾಣಿಸಿಕೊಳ್ಳುತ್ತಾಳೆ, ಕಾಣಿಸಿಕೊಂಡು ಮಕ್ಕಳಿಗೆ ನೀವು ಹೊಟ್ಟೆಗೆ ಅನ್ನವಿಲ್ಲದೆ ಸೊರಗಬೇಡಿ ಎಂದು ಉದ್ಯಾನ ವನದಲ್ಲಿ ಬಾಳೆ ಮರವಾಗಿ ಹುಟ್ಟುತ್ತಾಳೆ. ಇಂತಹ ಅತಿಮಾನುಷ ಸಂಗತಿಗಳು ಕಾವ್ಯದಲ್ಲಿ ಕಾಣಿಸಿಕೊಳ್ಳುತ್ತವೆ. ದಿನಕ್ಕೊಂದು ಬಾಳೆಹಣ್ಣು ಒಬ್ಬೊಬ್ಬರು ತಿನ್ನಿರಮ್ಮ ಎಂದು ಹೇಳುತ್ತಾಳೆ.

ಮತ್ತು ಈ ಬಾಳೆಮರದ ಸಂಗತಿಯನ್ನು ನಿಮ್ಮ ಮಲತಾಯಿಗೆ ತಿಳಿಸಬೇಡಿ ಎಂದು ಹೇಳುತ್ತಾಳೆ. ಅದರಂತೆ ಮಕ್ಕಳು ನಡೆದುಕೊಳ್ಳುತ್ತಾರೆ. ಇದನ್ನು ಹೇಳಿದಂತ ಭೂಲಕ್ಷ್ಮೀದೇವಿ ಮಾಯವಾಗಿ ಹೋಗುತ್ತಾಳೆ.

ಬೆಳಗಿನ ಮೂರು ಗಂಟೆ ಸಮಯದಲ್ಲಿ ಮಲತಾಯಿ ಕಾಮಿನಿ ಬರುತ್ತಾಳೆ. ಬಂದು ಕಗ್ಗಲರಾಗಿ ಮುದ್ದೆಯನ್ನು, ಕೆಟ್ಟುಹೋದ ಹುರುಳಿ ಸಾರನ್ನು ತೆಗೆದುಕೊಂಡು ಬಾವಿಕಲ್ಲಿನ ಮೇಲಿಟ್ಟು ಬನ್ನಿರೆ ನನ್ನ ಮಕ್ಕಳೇ ಎನ್ನುತ ಮಕ್ಕಳನ್ನು ಕರೆಯುತ್ತಾಳೆ. ಆದರೆ ಅವೊತ್ತು ಒಬ್ಬರಿಗೂ ಹಸಿವಲ್ಲ, ಯಾಕೆಂದರೆ ಅವರು ಬಾಳೆಹಣ್ಣು ತಿಂದು ನಿತ್ಯ ಕೆಲಸದಲ್ಲಿ ತೊಡಗಿ ಕೊಂಡಿರುತ್ತಾರೆ. ಇದನ್ನು ಅರಿತ ಮಹಾರಾಣಿ ಕಾಮಿನಿಯು ಒಂದು ದಿವಸ ಮಹಡಿಯ ಮೇಲೆ ನಿಂತುಕೊಂಡು ನೋಡುತ್ತಾಳೆ. ನನ್ನ ಸವತಿಯ ಮಕ್ಕಳಿಗೆ ಯಾವ ಊಟ ಕೊಟ್ಟರು ರೂಪ ಮಾತ್ರ ದಿನೇ ದಿನೇ ಚೆನ್ನಾಗಿ ಕಾಣಿಸಿಕೊಳ್ಳುತ್ತಾರೆ ಎಂದು ಯೋಚಿಸುತ್ತಿರುತ್ತಾಳೆ. ಮಹಡಿ ಮೇಲೆ ನಿಂತು ನೋಡುತ್ತಾಳೆ. ಇನ್ನು ನವಭೋಜರಾಜ ಬರುವಂತಹ ಸಮಯವಾಗಿದೆ ಎಂದು ತಿಳಿಯುತ್ತ ಕಗ್ಗಲರಾಗಿ ಮುದ್ದೆ ಮುಗ್ಗಲ ಹುರುಳಿಯ ಸಾರು ಕೊಟ್ಟರು ಏಳು ಜನ ಹೆಣ್ಣು ಮಕ್ಕಳು ಅಲ್ಲೆ ಸುಮ್ಮನೆ ಕುಳಿತುಕೊಂಡು ಬಾಳೆಹಣ್ಣನ್ನು ತಿನ್ನುತ್ತಾರೆ. ಇದನ್ನು ನೋಡಿದ ಮಲತಾಯಿ ಕಾಮಿನಿಯು ಅಲ್ಲಿಗೆ ದಾದಿಯರನ್ನು ಕರೆದುಕೊಂಡು ಉದ್ಯಾನವನಕ್ಕೆ ಬರುತ್ತಾಳೆ. ಬಂದು ಏಳು ಜನ ಮಕ್ಕಳನ್ನು ಕರೆದು ಈ ಬಾಳೆಹಣ್ಣು ನಿಮಗೆ ಯಾರು ಕೊಟ್ಟರು ಎಂದು ಕೇಳುತ್ತಾಳೆ. ಆಗ ಏಳು ಜನ ಮಕ್ಕಳು ಮಾತನಾಡದೇ ಸುಮ್ಮನೆ ನಿಂತುಕೊಳ್ಳುತ್ತಾರೆ. ಆಗ ಕಾಮಿನಿಯು ಏಳು ಜನ ಮಕ್ಕಳಿಗೆ ಹುಣಸೆ ಬರಲಿನಿಂದ ಹೊಡೆಯುತ್ತಾಳೆ. ಏಳು ಜನ ಮಕ್ಕಳಲ್ಲಿ ಬಾಲನಾಗಮ್ಮ ಹೊಡೆತ ತಾಳಲಾರದೆ ಅಮ್ಮ ಹೊಡೆಯ ಬೇಡಮ್ಮ, ಬಯ್ಯಬೇಡಮ್ಮ. ನೀವು ಹೇಳಿದಂಗ ಕೇಳುತ್ತೀವಿ ಅಂತ ಹೇಳುತ್ತಾಳೆ. ಮಲತಾಯಿ ಮಹಾರಾಣಿ ಕಾಮಿನಿಯು ಇಲ್ಲಿಗೆ ಯಾರು ಬಂದು ನಿಮಗೆ ಈ ಬಾಳೆ ಹಣ್ಣನ್ನು ಕೊಟ್ಟರು ಎಂದು ಕೇಳುತ್ತಾಳೆ. ಆಗ ಏಳು ಜನ ಮಕ್ಕಳು ಅಮ್ಮ ನಮ್ಮ ಉದ್ಯಾನವನದಲ್ಲಿ ಒಂದು ಬಾಳೆಮರ ಇದೆ. ಆ ಮರಕ್ಕೆ ಈಗ ಏಳು ಗೊನೆ ಇದೆ. ಅದರಲ್ಲಿ ನಾವು ದಿನಕ್ಕೊಂದು ತಿಂದರೆ ನಮಗೆ ಹಸಿವೆ ಆಗುವುದಿಲ್ಲಮ್ಮ ಎಂದು ಹೇಳುತ್ತಾರೆ. ಆಗ ಮಲತಾಯಿ ಕಾಮಿನಿಯು ನಡೆಯಿರಿ ಆ ಮರ ಎಲ್ಲಿದೆ ಎಂದು ತೋರಿಸಿರಿ ಎಂದು ಹೇಳುತ್ತಾಳೆ. ಆ ಮಕ್ಕಳು ಬಾಳೆ ಮರದ ಹತ್ತಿರ ಕರೆದುಕೊಂಡು ಹೋಗಿ ಅದನ್ನು ಕಾಮಿನಿಗೆ ತೋರಿಸುತ್ತಾರೆ. ಬಾಳೆಮರವನ್ನು ನೋಡುತ್ತಾಳೆ, ನೋಡಿ ಏಳು ಬಾಳೆಕಾಯಿಯನ್ನು ಮುರಿದುಕೊಂಡು ಮಹಾರಾಣಿ ಅರಮನೆಯ ಪಂಡಿತರ ಬಳಿಗೆ

ಹೋಗುತ್ತಾಳೆ. ಪಂಡಿತನ ಹತ್ತಿರ ಹೋಗಿ ಈ ರೀತಿ ಹೇಳುತ್ತಾಳೆ. ನಮ್ಮ ಉದ್ಯಾನವನದಲ್ಲಿ ಒಂದು ಬಾಳೆ ಮರವಿದೆ ಸ್ವಾಮಿ. ನಾಳೆ ಹನ್ನೆರಡು ಗಂಟೆಗೆ ನನ್ನ ಪತಿ ಬರುತ್ತಾನೆ. ಆ ಬಾಳೆಮರವನ್ನು ಕಡಿಸಬೇಕು ಎಂದು ಹೇಳಿ, ಆ ಮರವನ್ನು ಕಡಿಸುವಂತಹ ಕೆಲಸ ಮಾಡಿದರೆ ಒಂದು ಬಿಂದಿಗೆ ಹಣವನ್ನು ಕೊಡುತ್ತೇನೆ ಎಂದು ಹಣದ ಆಸೆಯನ್ನು ತೋರಿಸುತ್ತಾಳೆ. ಅದಕ್ಕೆ ಪಂಡಿತ ಮಹಾರಾಣಿ ನಾ ಹೇಳಿದಂಗ ಮಾಡಮ್ಮ ಅಂತ ಹೇಳಿ ಮಹಾರಾಣಿ ನಿನ್ನ ಪತಿ ಬರುವ ಸಮಯಕ್ಕೆ ಮನೆಯಲ್ಲಿ ನೀನು ಹೊಟ್ಟೆ ಬಾದಿ ಎನ್ನುತ್ತ ಮಲಗಿ ಬಿಡು. ಆಗ ನಿನ್ನ ಪತಿಯು ಓಡಿಬಂದು ಶಾಸ್ತ್ರ ಕೇಳಿಸುತ್ತಾನೆ. ಅದಕ್ಕೆ ನಾನು ಹೇಳುತ್ತೀನಿ ಅಂತ ಹೇಳಿ ಕಳಿಸಿದ. ಮಹಾರಾಣಿ ಕಾಮಿನಿಯು ಗಂಡ ಬರುವ ಸಮಯಕ್ಕೆ ಹೊಟ್ಟೆನೋವು ಎಂದು ಮನೆ ತುಂಬಾ ಉರುಳುತ್ತಿರುತ್ತಾಳೆ. ಆಗ ನವಭೋಜರಾಜ ಭಯದಿಂದ ಹೋಗಿ ಶಾಸ್ತ್ರವನ್ನು ಕೇಳಿಸುತ್ತಾನೆ. ಪಂಡಿತರ ಹತ್ತಿರ ಒಂದು ಬಿಂದಿಗೆ ಹಣ ತೆಗೆದುಕೊಂಡು ಹೋಗುತ್ತಾರೆ. ಪಂಡಿತ ಸುಳ್ಳುಪಳ್ಳಿನ ಪಂಚಾಂಗ ತೆಗೆದುಕೊಂಡು ಹೇಳುತ್ತಾನೆ. ಮಹರಾಜ ನಿನ್ನ ಉದ್ಯಾನವನದಲ್ಲಿ ಒಂದು ಬಾಳೆ ಮರವಿದೆ ಅದನ್ನು ಕಡಿಸಿದರೆ ನಿನ್ನ ಪತ್ನಿ ಕಾಮಿನಿಗೆ ಹೊಟ್ಟೆಬಾದೆ ವಾಸಿಯಾಗುತ್ತದೆ ಎಂದು ಹೇಳುತ್ತಾನೆ.

ಪಂಡಿನ ಮಾತನ್ನು ಕೇಳಿದ ಮಹರಾಜ ನವಭೋಜರಾಜ ಮನೆಗೆ ಬಂದು ಆಳುಗಳನ್ನು ಕರೆದುಕೊಂಡು ಉದ್ಯಾನವನಕ್ಕೆ ಹೋಗುತ್ತಾನೆ. ಉದ್ಯಾನವನದ ಬಾಳೆ ಮರವನ್ನು ಕಡಿಸಬೇಕು ಎಂದು ಹೇಳುತ್ತಾನೆ. ಏಳು ಜನ ಮಕ್ಕಳು ಓಡಿ ಬಂದು ತಂದೆ, ನಮ್ಮ ಜನಕನೇ ಬಾಳೆ ಮರವನ್ನು ಕಡಿಸಬೇಡ. ನಾವು ಬಾಳೆಹಣ್ಣು ತಿಂದು ಕಾಲ ಕಳೆಯುತ್ತಿದ್ದೇವೆ ಎಂದು ಏಳು ಜನ ಹೆಣ್ಣು ಮಕ್ಕಳು ತಂದೆಯನ್ನು ಬೇಡಿಕೊಳ್ಳುತ್ತಾರೆ. ಮಕ್ಕಳು ಎಷ್ಟು ಬೇಡಿಕೊಂಡರು ತಂದೆ ಕೇಳಲಿಲ್ಲ, ಮರವನ್ನು ಕಡಿಸುತ್ತಾನೆ. ಮಹಾರಾಣಿ ಕಾಮಿನಿಗೆ ಹೊಟ್ಟೆಬಾದಿ ವಾಸಿಯಾಯ್ತು. ಇಲ್ಲಿ ಅರಮನೆಯ ಪಂಡಿತನ ಕುತಂತ್ರದಿಂದ ಮಕ್ಕಳನ್ನು ಮನೆ ಬಿಟ್ಟು ಕಳಿಸಬೇಕು ಅಂತ ಯೋಚನೆ ಮಾಡುತ್ತ ಹಣದ ದುರಾಸೆಗೆ ಇವರನ್ನು ತಾಯಿಯ ತವರು ಮನೆಗೆ ಬಿಟ್ಟು ಬರ್ರಿ ಎಂದು ಹೇಳಿದ. ಇದನ್ನ ನವಭೋಜರಾಜನಿಗೆ ಮಕ್ಕಳನ್ನು ಓರಗಲ್ಲ ಪಟ್ಟಣಕ್ಕೆ, ಅದು ಹೆಂಡತಿ ಭೂಲಕ್ಷ್ಮೀ ದೇವಿಯ ತವರು ಮನೆಯಾದ್ದರಿಂದ ಮಕ್ಕಳನ್ನು ಅಲ್ಲಿಗೆ ಬಿಟ್ಟು ಬರಬೇಕೆಂದು ಹೇಳುತ್ತಾನೆ ಪಂಡಿತ. ಈ ಮಾತನನು ಕೇಳಿದ ನವಭೋಜರಾಜ ಈ ಮಾತನ್ನು ವಿರೋಧ ಮಾಡದೆ, ಪಂಡಿತನ ಮಾತಿನಂತೆ ಹೆಂಡತಿ ಕಾಮಿನಿಗೆ ಹೇಳುತ್ತಾನೆ. ರೊಟ್ಟಿ ಬುತ್ತಿ ಕಟ್ಟು ಅಂತ ಹೇಳಿ ಚಂದ್ರಾಯುಧವನ್ನು ತೆಗೆದುಕೊಂಡು ಉದ್ಯಾನವನದಲ್ಲಿದ್ದ ಮಕ್ಕಳನ್ನು ಕರೆದುಕೊಂಡು ಬನ್ನಿರಮ್ಮ ಮಕ್ಕಳೇ ಒಂದುಮಾತ ಹೇಳುತೀನಿ ಅಂತ ಮಕ್ಕಳನ್ನು ಹತ್ತಿರಕ್ಕೆ ಕರೆದು, ನಿಮ್ಮ

ತಾಯಿ ತವರು ಮನೆ ಓರಂಗಲ್ಲ ಪಟ್ಟಣವಿದೆ. ಅಲ್ಲಿ ನಿಮ್ಮ ತಾಯಿ ತಮ್ಮಂದಿರು ಇದ್ದಾರೆ. ಅವರ ಬಳಿಗೆ ನಿಮ್ಮನ್ನು ಬಿಟ್ಟು ಬರತ್ತೀನಿ ಅಂತ ಹೇಳಿದ. ಈ ಮಾತನ್ನು ಕೇಳಿದ ಮಕ್ಕಳು ನಾವು ಹುಟ್ಟಿ ಹನ್ನೆರಡು ವರುಷವಾಯಿತು. ನಮಗೆ ಒಂದು ಮಾತನ್ನು ತಿಳಿಸಲಿಲ್ಲ ಅಂತ ಅಂದುಕೊಂಡರು. ನಮ್ಮ ತಾಯಿಯ ತಮ್ಮಂದಿರು ಅಂದರೆ ನಮ್ಮ ಸೋದರ ಮಾವನವರು. ಏಳು ಜನ ಇದ್ದಾರೆ. ಒಂದು ದಿನವು ನಮ್ಮನ್ನು ಕರೆದುಕೊಂಡು ಹೋಗಲಿಲ್ಲ. ಅಂತ ಹೇಳಿಕೊಳ್ಳುತ್ತಾರೆ. ನವಭೋಜರಾಜ ರೊಟ್ಟಿ ಬುತ್ತಿ ಕಟ್ಟಿಸಿಕೊಂಡು, ಚಂದ್ರಾಯುಧವ ಹಿಡಿದುಕೊಂಡು ಮಕ್ಕಳನ್ನು ಕರೆದುಕೊಂಡು ಹೋಗುತ್ತಾನೆ. ಮಕ್ಕಳು ತಾಯಿಯ ತವರು ಮನೆಯ ಆಸೆಯಿಂದ ಹೊರಡುತ್ತಾರೆ. ತಂದೆ ನವಭೋಜರಾಜ ಮುಂದೆ ಮಕ್ಕಳು ಹೊರಡುತ್ತಾರೆ. ಹನ್ನೆರಡು ಯೋಜನೆ ದಾರಿಯನ್ನು ಕಾಡಿನಲ್ಲಿ ನಡೆಸಿದ ನವಭೋಜರಾಜ ಏಳು ಜನ ಮಕ್ಕಳನ್ನೂ ಕಾಲಲ್ಲಿ ಬೊಬ್ಬೆ ಬಂದಿವೆ. ಸಂಜೆ ಆರು ಗಂಟೆ ಮಧ್ಯೆ ಕಾಡಿನಲ್ಲಿ ಸುತ್ತ ತಿರುಗಿ ನೋಡುತ್ತಾನೆ. ಸಂಜೆ ವೇಳೆ ಇನ್ನು ಮುಂದಕ್ಕೆ ನಡೆಯಲಿಕ್ಕೆ ಆಗದು. ಇವತ್ತು ಇಲ್ಲೇ ಇದ್ದು, ನಾಳೆ ಹೋದರಾಯಿತು ಎಂದನು. ತಂದೆ ನವಭೋಜರಾಜ ಈಚಲವನ ತೋಪಿನಲ್ಲಿ ಏಳು ಜನರು ಮಲಗಿಕೊಂಡರು. ಏಳು ಜನ ಮಕ್ಕಳ ಮಧ್ಯದಲ್ಲಿ ತಂದೆ ಮಲಗಿಕೊಂಡ. ಕಾಡಿನಲ್ಲಿ ರಾತ್ರಿ ನಡೆದ ಆಯಾಸದಲ್ಲಿ ಹಾಸಲು ಹಾಸಿಗೆಯಿಲ್ಲ, ಹೊದಿಕೆಯಿಲ್ಲ, ನಡೆದುಕೊಂಡು ಬಂದಿದ್ದ ಮಕ್ಕಳಿಗೆ ಆಯಾಸವಾಗಿ ಮಲಗಿಕೊಂಡರು.

ಆಗ ನವಭೋಜರಾಜ ಏನು ಯೋಚನೆ ಮಾಡುತ್ತಾನೆ ಎಂದರೆ ಮಕ್ಕಳನ್ನು ಕಾಡಿನಲ್ಲಿ ಬಿಟ್ಟು ಹೋಗಬಾರದು. ಎಲ್ಲರನ್ನು ಕೊಲೆಯ ಮಾಡಿ ಹೋಗಬೇಕು ಎಂದು ರಾತ್ರಿ ಹನ್ನೆರಡು ಗಂಟೆಯ ಸಮಯದಲ್ಲಿ ಮಕ್ಕಳ ಸತ್ತು, ಹೆಂಡತಿ ಉಳಿಯಬೇಕು ಎಂದು ಅರ್ಧರಾತ್ರಿ ಸಮಯದಲ್ಲಿ ಚಂದ್ರಾಯುಧ ಹಿಡಿದುಕೊಂಡು ಏಳುತ್ತಾನೆ. ಆಗ ಏಳು ಹೆಡೆಯ ಸರ್ಪ ಪ್ರತ್ಯಕ್ಷವಾಗಿ ಕಾಣಿಸಿತು. ಸರ್ಪ ಕಾಣಿಸಿಕೊಂಡು ಯಾರು ಮಕ್ಕಳು ಇಲ್ಲಿಗೆ ಯಾಕೆ ಕರೆದು ತಂದಿರುವೆ, ಈಗ ಮಕ್ಕಳನ್ನು ಕೊಲ್ಲೊದಾದರೆ ನೀನು ಊರಿಗೆ ಹೋಗಲಾರೆ, ಅವರನ್ನು ಕಾಡಿನಲ್ಲಿ ಬಿಟ್ಟು ಹೋಗಬಹುದು ಎಂದು ಹೇಳುತ್ತದೆ. ಯಾಕೆ ಇಲ್ಲಿ ಸರ್ಪ ಕಾಣಿಸಿ ಕೊಳ್ಳುತ್ತದೆ ಎಂದರೆ ಅವರು ಏಳು ಜನ ಮಕ್ಕಳು ನಾಗೇಂದ್ರನ ವರಪ್ರಸಾದದಿಂದ ಹುಟ್ಟಿದವರಾಗಿರುತ್ತಾರೆ. ಆದ ಕಾರಣ ಅವರನ್ನು ಅವರ ತಂದೆ ಕೊಲ್ಲಲ್ಲು ಹೋದಾಗ ಸರ್ಪ ಅವನಿಗೆ ಹೇಳುತ್ತದೆ. ಇನ್ನೊಂದು ತಂದೆಯಾದವನೆ ಇಲ್ಲಿ ಮಕ್ಕಳನ್ನು ಕೊಲ್ಲಲ್ಲು ಪ್ರಯತ್ನಿಸುತ್ತಾನೆ. ಅಂದರೆ ಪುರುಷ ಪ್ರಧಾನವ್ಯವಸ್ಥೆಯು ಯಾವ ರೀತಿ ಇಲ್ಲಿ ಕಾಣಬಹುದು ಎಂಬುದನ್ನು ಗಮನಿಸಬಹುದು. ನವಭೋಜರಾಜ ಮಕ್ಕಳನ್ನು ಕಾಡಿನಲ್ಲಿ ಬಿಟ್ಟು ಹೊರಡುತ್ತಾನೆ. ಆಗ ಬೆಳಗಿನ ಜಾವದಲ್ಲಿ ಮಕ್ಕಳು ಏಳುತ್ತಾರೆ. ಕಿರಿಯ ಮಗಳು

ಬಾಲನಾಗಮ್ಮ ತಂದೆ ಮಲಗಿರುವ ಜಾಗವನನು ನೋಡಿ ಅಲ್ಲಿ ತಂದೆ ಇಲ್ಲದಿರುವುದನ್ನು ಕಂಡು ತನ್ನ ಅಕ್ಕಂದಿರನ್ನು ಏಳಿಸುತ್ತಾಳೆ. ತಂದೆ ಕಾಣುತ್ತಿಲ್ಲ, ಎದ್ದೇಳಿ ಅಂದಾಗ ಮಕ್ಕಳೆಲ್ಲ ಎದ್ದು ನಿದ್ದೆಗಣ್ಣಲ್ಲಿ, ಕಿರುಚಿಕೊಂಡು ಏಳು ಜನ ಏಳು ದಾರಿ ಹಿಡಿದುಕೊಂಡು ಉಟ್ಟ ಬಟ್ಟೆಯನ್ನು ಗಿಡಮರಕ್ಕೆ ತಗುಲಿಸುತ್ತಾ ಏಳು ಜನ ದಿಕ್ಕಾಪಾಲಾಗಿ ಹೋದರು. ಇದನ್ನು ಕಂಡ ನಾಗರಾಜ ಒಂದು ಕೋತಿಯಾಗಿ ಬಂದು ಇರುತ್ತಾನೆ. ಇದನ್ನು ನೋಡಿದಂತ ಬಾಲನಾಗಮ್ಮ, ಅಕ್ಕಂದಿರನ್ನು ಕರೆಯುತ್ತಾಳೆ. ಆಗ ಕೋತಿ ಏಳು ಜನ ಮಕ್ಕಳನ್ನು ಏಳು ಕಡೆ ಹೋದವರನ್ನು ಒಂದು ಕಡೆ ಸೇರಿಸುತ್ತದೆ. ಇಷ್ಟೆಲ್ಲ ಕಷ್ಟವನ್ನು ಅವರು ಅನುಭವಿಸಿದರು.

**೪.೪. ನಾಗಮ್ಮ ವೈವಾಹಿಕ ಬದುಕು**

ಓರಗಲ್ಲ ಪಟ್ಟದಲ್ಲಿ ಏಳುಜನ ಅಣ್ಣತಮ್ಮದಿರು
ಎಲ್ಲ ಕಾಡು ಬೇಟೆಯಾಡ್ಡೊ ಈ ಕಾಡಿಗೆ ಹೋಗಲಿಲ್ಲ
ದಂಡುದಾಳಿ ಕಟ್ಟಿಕೊಂಡು ಹೊರಟರಣ್ಣ ಬೇಟೆಗಾಗಿ
ಏಳುಜನವು ಹೊರಟರಾಗ ಕಾಡು ಬೇಟೆಗೆ ಹೊರಟರಾಗ
ಎಲ್ಲಿ ತಿರುಗಿ ನೋಡಿದರು ಬೇಟೆ ಎಲ್ಲೂ ಕಾಣಲಿಲ್ಲ
ತಿರುಗಿ ತಿರುಗಿ ಬಾಯಿ ಆರಿ ನೀರನಾದರೆ ಹುಡುಕುತಾರೆ
ಎಲ್ಲಿ ನೋಡಿದರು ನೀರೆಯಿಲ್ಲ ಬಾಯಿ ಆರಿ ಬಳಲಿದಾರೆ
ಆಗ ಎತ್ತರವಾದ ಬೆಟ್ಟದ ಮೇಲೆ ಹತ್ತಿ ಅವರು ನೋಡುತಾರೆ
ಆಗ ಸುತ್ತಮುತ್ತ ನೋಡುತಾರೆ ನೀರು ಮಾತ್ರ ಕಾಣಲಿಲ್ಲ
ಜಂಬುನೇರಳೆ ವನಕಾಣ್ತು ಮಲ್ಲಿಗೆ ಹೂವಿನಗಿಡ ಕಾಣ್ತು
ಅಣ್ಣ ಅಲ್ಲಿಗೋದರೆ ನೀರಾದರು ಸಿಕ್ಕಬಹುದು ಎನ್ನುತಾರೆ
ಅಣ್ಣತಮ್ಮದಿರ ಕರದುಕೊಂಡು ದಂಡುದಾಳಿ ಕರದುಕೊಂಡು
ಜಂಬುನೇರಳೆ ವನದ ಹತ್ರ ಬಂದರಾಗ ಏಳುನಜನವು
ಎಲೆಯನ್ನು ಅಡಿಕೆಯನ್ನು ಹಾಕಿಕೊಂಡು ಕುಳಿತವರೆ
ದಂಡುದಾಳಿ ಬರೊಶಬ್ದ ಕೇಳುತಾರೆ ಹೆಣ್ಣು ಮಕ್ಳು
ಮಾನಕ್ಕಾದರೆ ಅಂಜಿಕೊಂಡು ಗುಹೆಯೊಳಕ್ಕೆ ಸೇರುತಾರೆ
ಗುಹೆಯೊಳಕ್ಕೆ ಹೋಗೋದನ್ನು ನೋಡುತಾನೆ ಕಾರುವರ್ದ

ಏಳುಜನ ಹೆಣ್ಣುಮಕ್ಕಳ ನೋಡಿ ತಾನೆನ್ನುತಾನೆ
ಯಾರೊ ನರಮನುಷ್ಯರು ವಾಸವಾಗಿ ಇರುವರಣ್ಣ
ಎಂದು ಹೇಳಿ ದಂಡುದಾಳಿ ಸುತ್ತಬೇಲಿ ಹಾಕಿದರು
ಆಗ ಬೇಲಿಂದಾಚೆ ನಿಂತುಕೊಂಡ್ರು ದಂಡುದಾಳಿ ನಿಂತುಕೊಳ್ಳು
ಆಗ ಆರು ಜನಕೆ ಕಿರಿಯೋನು ಕಾರವರ್ದ ರಾಜನು
ಯಾರಪ್ಪ ಇರುವವನು ನೀರಕುಡಿಯೊಕ್ಕೆ ನಾವು ಬಂದೊ
ಎಂದು ಮೂರು ಸಾರಿ ಕೂಗಿದರು ಮಾತೊಬ್ಬರು ಆಡಲಿಲ್ಲ
ಆಗ ಕಿರಿಯೋಳೆ ಬಾಲನಾಗಮ್ಮ ಏನೆಂದುತ್ತರ ಕೊಡುತಾಳೆ
ಸ್ವಾಮಿ ಗಂಡಸರಲ್ಲ ಇರುವರು ನಾವು ಏಳುಜನ ಹೆಣ್ಣುಮಕ್ಳು
ಸ್ವಾಮಿ ತಂದೆ ತಾಯಿ ಕಳೆದುಕೊಂಡು ಇಲ್ಲಿ ನಾವು ಇರುತೀವಿ
ತಂದೆತಾಯಿ ಅಂದ ಮಾತ ಕೇಳುತಾನೆ ರಾಜಕುಮಾರ
ಅಮ್ಮ ನಿಮ್ಮ ತಂದೆ ಯಾರು ಹೇಳು ತಾಯಿ ಯಾರು ಹೇಳಬೇಕು
ಸ್ವಾಮಿ ಭೂಚಕ್ರ ಪಟ್ಟಣವು ನವಭೋಜರಾಜನು ಇರುತಾನಲ್ಲಿ
ನವಭೋಜರಾಜನ ಪ್ರೇಮದ ಮಡದಿ ಭೂಲಕ್ಷ್ಮೀದೇವಿ
ಏಳುಜನ ಹೆಣ್ಣು ಮಕ್ಕಳ ಪಡೆದಳು ಭೂಲಕ್ಷ್ಮೀದೇವಿ
ಸ್ವಾಮಿ ತಾಯಿ ಸತ್ತು ಎರಡು ವರ್ಷ ಬಲತಾಯಿ ಬಂದವಳೆ ಇಗ
ಆಗ ನವಭೋಜ ನಮ್ಮ ತಂದೆ ಓರುಗಲ್ಲು ಪಟ್ಟಣಕೆ
ನಿಮ್ಮನ್ನಾದರು ಬಿಡುತೀನಂದು ಇಲ್ಲಿ ಕರೆತಂದು ಬಿಟ್ಟ
ಕಾಡಿನಲ್ಲಿ ಬಿಟ್ಟ ತಂದೆ ಎಲ್ಲೊ ಹೊರಟೆ ಹೋದನಯ್ಯಾ
ಇದ್ದ ಸಂಗತಿ ತಿಳಸುತಾಳೆ ಶಿವಶರಣೆ ಬಾಲನಾಗಮ್ಮ
ಅಣ್ಣತಮ್ಮರೀಗ ಬಾಲ ಯೋಚನೆ ಮಾಡುತಾರೆ
ನಮ್ಮ ಅಕ್ಕನಿಗೆ ಅಕ್ಕಳಿಲ್ಲ ಎಂಬುದೇನೊ ನಮಗೆ ಗೊತ್ತು
ಸ್ವಾಮಿ ಹೊಟ್ಟೇಲಿ ಹುಟ್ಟಿದ ಮಕ್ಕಳಲ್ಲ ವರದ ಮಕ್ಕಳು ಏಳುಜನ
ಆಗ ಇದ್ದ ಸಂಗತಿ ಕೇಳಿ ಅವರಿಗೆ ಬಾಳ ಸಂತಸ ಬರುತೈತೆ
ಅಮ್ಮ ಓರುಗಲ್ಲು ಪಟ್ಟವೆ ನಮ್ಮೂರು ಬನ್ನಿ ನೀವು

ಭೂಲಕ್ಷ್ಮೀದೇವಿಯಾದರೆ ಸದ್ಯ ನಮ್ಮ ಅಕ್ಕನಮ್ಮ
ಆಗ ಅಂತಪ್ಪ ಮಾತು ಕೇಳಿ ಆಡುತಾರೆ ಹೆಣ್ಣು ಮಕ್ಳು
ಸುತ್ತ ಬೇಲಿ ಮಾಯವಾಯ್ತು ಏಳುಜನಕೆ ಹೆಣ್ಣು ಮಕ್ಳು
ತಲೆಯ ಮೇಲಿನ ಪೇಟ ಕೊಟ್ರು ಏಲು ಜನರ ಕರದುಕೊಂಡ
ಓರುಗಲ್ಲು ಪಟ್ಟಣಕೆ ಹೋದರಲ್ಲ ಏಳು ಜನವು
ತಂದೆಯಾದ ಓರುಗಲ್ಲು ರಾಜನಿಗೆ ಇದ್ದ ಸಂಗ್ರಿ ತಿಳಿಸುತಾರೆ
ಒಂದು ದಿನ ಏಳು ಜನಕೆ ಮದುವೆನಾದರೆ ಮಾಡಬೇಕು
ಎಂದು ಒಂದು ದಿನದಲ್ಲಿ ಶುಭ ಮುಹೂರ್ತ ನಡೆಸುತಾನೆ
ಆಗ ಕಿರಿಯೋನೆ ಕಾರುವರ್ದ ಬಾಲನಾಗಮ್ಮ ಕೂಡುತಾನೆ

ತಂದೆ ನವಭೋಜರಾಜನು ಎರಡನೇ ಹೆಂಡತಿಯ ಮಾತನ್ನು ಕೇಳಿ ಏಳು ಜನಮಕ್ಕಳನ್ನು ಕಾಡಿನಲ್ಲಿ ಬಿಟ್ಟು ಹೋಗಿರುತ್ತಾನೆ. ಆಗ ಆ ಕಾಡಿನಲ್ಲಿ ನಾಗರಾಜ ಕೋತಿಯ ವೇಷದಲ್ಲಿ ಬಂದು ಮಕ್ಕಳನ್ನು ಒಂದು ಕಡೆ ಸೇರಿಸಿ, ಜಂಬುನೇರಳೆ ತೋಪು ಮಾಡಿ ಒಳಗೆ ಗವಿಯನ್ನು ಮಾಡಿ, ಏಳು ಜನ ಮಕ್ಕಳನ್ನು ಗವಿಯಲ್ಲಿ ಬಿಟ್ಟು ಮಾಯವಾಯಿತು. ಏಳು ಜನ ಹೆಣ್ಣು ಮಕ್ಕಳು ಗವಿಯಲ್ಲಿ ಇರುತ್ತಾರೆ. ಊಟ ಮಾಡಲಿಕ್ಕೆ ಅನ್ನವಿಲ್ಲ, ಹೊದಿಯುವುದಕ್ಕೆ ಹೊದಿಕೆ ಇಲ್ಲ, ಹನ್ನೆರಡು ವರ್ಷ ತುಂಬಿದ ಮಕ್ಕಳಾಗಿ ಕಾಡಿನಲ್ಲಿ ಇರುತ್ತಾರೆ. ಏಳು ಜನ ಹೆಣ್ಣು ಮಕ್ಕಳು ಒಂದೇ ದಿವಸ ಋತುಮತಿಯರಾಗುತ್ತಾರೆ. ಅವರಿಗೆ ಸೀರೆ ಇಲ್ಲ, ಆಗ ಅವರು ಜಂಬುನೇರಳೆ ಮರದ ಎಲೆಯನ್ನು ಸೀರೆಯಾಗಿ ಉಡುವರು. ಓರಂಗಲ್ಲು ಪಟ್ಟಣದ ಏಳು ಜನ ಅಣ್ಣತಮ್ಮಂದಿರು ಕಾಡಿಗೆ ಬೇಟೆಯಾಡಲು ಬರುತ್ತಾರೆ. ಎಲ್ಲ ಕಡೆ ತಿರುಗಿದರು ಅವರಿಗೆ ಬೇಟೆ ಕಾಣುವುದಿಲ್ಲ. ಅವರಿಗೆ ತಿರುಗಿ ತಿರುಗಿ ಬಾಯಿ ಆರಿ ನೀರನ್ನು ಹುಡುಕುತ್ತಾರೆ. ಎಲ್ಲಿ ನೋಡಿದರೂ ನೀರು ಕಾಣುವುದಿಲ್ಲ. ಆಗ, ಎತ್ತರವಾದ ಬೆಟ್ಟದ ಮೇಲೆ ಹತ್ತಿ ನೋಡುತ್ತಾರೆ. ಆಗ ಸುತ್ತಮುತ್ತ ನೋಡುತ್ತಾರೆ ನೀರು ಮಾತ್ರ ಕಾಣುವುದಿಲ್ಲ ಅಲ್ಲಿ. ಜಂಬುನೇರಳೆ ವನ ಕಂಡಿತು. ಅಲ್ಲಿ ಮಲ್ಲಿಗೆ ಹೂವಿನ ಗಿಡ ಕಂಡಿತು. ಆಗ ಅವರು ಅಲ್ಲಿಗೋದರೆ ನೀರಾದರು ಸಿಕ್ಕಬಹುದು ಎನ್ನುತ್ತಾರೆ. ಅಣ್ಣ ತಮ್ಮಂದಿರನ್ನು ಕರೆದುಕೊಂಡು, ದಂಡುದಾಳು ಕರೆದುಕೊಂಡು, ಜಂಬುನೇರಳೆ ವನದ ಹತ್ರ ಬಂದರಾಗ ಏಳು ಜನರು. ಹೆಣ್ಣು ಮಕ್ಕಳು ಜಂಬುನೇರಳೆ ವನದಲ್ಲಿ ಬಿಸಿಲಲ್ಲಿ ಕೂತುಕೊಂಡು ಎಲೆ ಅಡಿಕೆಯನ್ನು ಹಾಕಿಕೊಂಡು ಕುಳಿತಿರುತ್ತಾರೆ. ದಂಡು ದಾಳಿ ಬರೋ ಶಬ್ದ ಕೇಳಿ ಹೆಣ್ಣು

ಮಕ್ಕಳು ಗುಹೆಯೊಳಕ್ಕೆ ಹೋಗುತ್ತಾರೆ. ಹೆಣ್ಣುಮಕ್ಕಳು ಗುಹೆಯೊಳಕ್ಕೆ ಹೋಗುವುದನ್ನು ಕಾರುವರ್ಧ ರಾಜ ನೋಡಿ ಅಲ್ಲಿ ಯಾರೋ ನರಮನುಷ್ಯರು ವಾಸವಾಗಿದ್ದಾರೆ ಅಣ್ಣ ಎಂದು ಹೇಳಿ ದಂಡುದಾಳಿ ಸುತ್ತಬೇಲಿ ಹಾಕಿದರು. ಆಗ ಬೇಲಿಂದಾಚೆಗೆ ನಿಂತುಕೊಳ್ಳುತ್ತಾರೆ. ಅವರ ಜೊತೆ ದಂಡುದಾಳಿ ನಿಂತುಕೊಂಡಿತು. ಆಗ ಆರು ಜನಕ್ಕೆ ಕಿರಿಯವನಾದ ಕಾರುವರ್ಧರಾಜನು ಯಾರಪ್ಪ ಇರುವವರು. ನೀರು ಕುಡಿಯಲ್ಲಿಕ್ಕೆ ನಾವು ಬಂದಿದ್ದೇವೆ ಎಂದು ಮೂರು ಸಾರಿ ಕೂಗಿದರು ಕೂಡ ಮಾತನಾಡಲಿಲ್ಲ. ಆಗ ಕಿರಿಯವಳು ಬಾಲನಾಗಮ್ಮ ಸ್ವಾಮಿ ನಾವು ಗಂಡಸರಲ್ಲ, ನಾವು ಹೆಂಗಸರು ಏಳು ಜನ ಹೆಣ್ಣುಮಕ್ಕಳು. ನಾವು ತಂದೆ-ತಾಯಿ ಕಳೆದುಕೊಂಡು ಇಲ್ಲಿ ಇದ್ದೀವಿ ಎಂದು ಹೇಳಿದಳು. ತಂದೆ-ತಾಯಿ ಅಂದ ಮಾತು ಕೇಳಿದ ರಾಜಕುಮಾರ ಆಗ ಅವರಿಗೆ ಅಮ್ಮ ನಿಮ್ಮ ತಂದೆ-ತಾಯಿ ಯಾರು ಹೇಳು ತಾಯಿ ಅಂತ ಕೇಳಿದ ಆಗ ಬಾಲನಾಗಮ್ಮ ಭೂಚಕ್ರ ಪಟ್ಟಣದ ನವಭೋಜರಾಜ ನಮ್ಮ ತಂದೆ, ಭೂಲಕ್ಷ್ಮೀದೇವಿ ನಮ್ಮ ತಾಯಿ. ಏಳು ಜನ ಹೆಣ್ಣುಮಕ್ಕಳನ್ನು ಪಡೆದು ಮರಣ ಹೊಂದಿ, ಎರಡು ವರ್ಷವಾಯಿತು. ನಮಗೆ ಮಲತಾಯಿ ಬಂದಿದ್ದಾಳೆ. ನಮ್ಮ ತಂದೆ ನವಭೋಜರಾಜ ನಮ್ಮನ್ನು ಓರಂಗಲ್ಲು ಪಟ್ಟಣಕ್ಕೆ ಬಿಡುತ್ತೀನಿ ಅಂತ ಇಲ್ಲಿಗೆ ಕರೆದುಕೊಂಡು ಬಂದು ಇಲ್ಲಿ ಬಿಟ್ಟು ಹೋಗಿದ್ದಾನೆ ಎಂದು ಬಾಲನಾಗಮ್ಮ ನಡೆದ ಸಂಗತಿಯನ್ನು ತಿಳಿಸುತ್ತಾಳೆ. ಆಗ ಅಣ್ಣ ತಮ್ಮಂದಿರು ಬಾಳ ಯೋಚನೆ ಮಾಡುತ್ತಾ ನಮ್ಮ ಅಕ್ಕನಿಗೆ ಮಕ್ಕಳಿಲ್ಲ ಎಂಬ ಸಂಗತಿ ಗೊತ್ತು ಎಂದುಕೊಳ್ಳುತ್ತಾರೆ. ಆಗ ಬಾಲನಾಗಮ್ಮ ಸ್ವಾಮಿ ನಾವು ಹೊಟ್ಟೇಲಿ ಹುಟ್ಟಿದ ಮಕ್ಕಳಲ್ಲ. ನಾಗೇಂದ್ರನ ವರಪ್ರಸಾದದಿಂದ ಹುಟ್ಟಿದ ಮಕ್ಕಳು ನಾವು ಎಂದು ಹೇಳಿದರು. ಆಗ ಇದ್ದ ಸಂಗತಿ ಕೇಳಿ ಅವರಿಗೆ ಬಹಳ ಸಂತೋಷವಾಗುತ್ತೆ. ಆಗ ಅವರು ಓರಂಗಲ್ಲು ಪಟ್ಟಣವೇ ನಮ್ಮೂರು. ಭೂಲಕ್ಷ್ಮೀದೇವಿ ನಮ್ಮ ಅಕ್ಕ ಅಂತ ಹೇಳಿದರು. ಈ ಮಾತನ್ನು ಕೇಳಿದ ಹೆಣ್ಣು ಮಕ್ಕಳು ಅವರ ಸುತ್ತಲಿರುವಂತ ಬೇಲಿ ಮಾಯಾವಾಯಿತು. ಏಳು ಜನರಿಗೆ ಬಟ್ಟೆ ಇರುವುದಿಲ್ಲ. ಆಗ ರಾಜರು ತಮ್ಮ ತಲೆಯ ಮೇಲಿನ ಪೇಟವನ್ನು ಆ ಏಳು ಜನ ಹೆಣ್ಣು ಮಕ್ಕಳಿಗೆ ಕೊಡುತ್ತಾರೆ. ಇಲ್ಲಿ ಅವರಲ್ಲಿ ಮಾನವೀಯತೆ ದೃಷ್ಟಿ ಮತ್ತು ಸಂಬಂಧಕ್ಕೆ ಇರುವ ಬೆಲೆಯನ್ನು ಇಲ್ಲಿ ಗಮನಿಸಬಹುದಾಗಿದೆ. ಆಗ ಏಳು ಜನ ಹೆಣ್ಣು ಮಕ್ಕಳನ್ನು ಓರಂಗಲ್ಲು ಪಟ್ಟಣಕ್ಕೆ ಕರೆದುಕೊಂಡು ಹೋಗುತ್ತಾರೆ. ಓರಂಗಲ್ಲು ರಾಜನಿಗೆ ಈ ಸಂಗತಿಯನ್ನು ತಿಳಿಸುತ್ತಾರೆ. ಇದನ್ನರಿತ ರಾಜ ಏಳು ಜನಕ್ಕೆ ಒಂದು ದಿನ ಶುಭ ಮೂಹೂರ್ತ ನಡೆಸಿ ಏಳು ಜನಕ್ಕೆ ಮದುವೆ ಮಾಡಿಸುತ್ತಾನೆ. ಆ ಏಳು ಜನರಲ್ಲಿ ಕಿರಿಯ ರಾಜನಾದ ಕಾದುವರ್ಧ ರಾಜ ಬಾಲನಾಗಮ್ಮನನ್ನು ಮದುವೆಯಾಗುತ್ತಾನೆ.

ಮದುವೆಯಾಗಿ ಒಂದು ವರ್ಷವಾಯಿತು. ಆಗೆ ಎರಡು–ಮೂರು ವರ್ಷ ಕಳೆಯಿತು. ಇವರಿಗೆ ಮಕ್ಕಳ ಫಲವಿಲ್ಲ. ಆಗ ಇವರನ್ನು ಅಂದರೆ ಬಾಲನಾಗಮ್ಮರನ್ನು ಅಕ್ಕಪಕ್ಕದ ರಾಣಿಯರು ನಿಂದನೆ ಮಾಡುತ್ತಾರೆ. ಇಲ್ಲಿಯೂ ಕೂಡ ಸಂತಾನಫಲಕ್ಕಾಗಿ ಯಾವೆಲ್ಲ ಕಾರ್ಯವನ್ನು ಬಾಲನಾಗಮ್ಮ ಮಾಡುತ್ತಾಳೆ, ಜನರ ನಿಂದನೆಯನ್ನು ತಾಳಲಾರದೆ ಬಾಲನಾಗಮ್ಮ ಕಾಡಿಗೆ ಹೋಗುತ್ತಾಳೆ. ಕಾಡಿಗೆ ಹೋಗಿ ಶಿವನನ್ನು ಕುರಿತು ತಪಸ್ಸು ಮಾಡುತ್ತಾಳೆ. ಬಾಲನಾಗಮ್ಮನ ಭಕ್ತಿಗೆ ಮೆಚ್ಚಿದಂತೆ ಶಿವನು ಪ್ರತ್ಯಕ್ಷವಾಗುತ್ತಾನೆ. ಪ್ರತ್ಯಕ್ಷವಾಗಿ ಅಮ್ಮ ನಿನಗೆ ಮಕ್ಕಳ ಭಾಗ್ಯ ಕೊಡುತ್ತೇನೆ. ಮಗು ಹುಟ್ಟಿದ ಮೂರು ತಿಂಗಳಲ್ಲಿ ಕಷ್ಟ ಬರುತ್ತದೆ ಎಂದು ಹೇಳಿದ. ಆಗ ಬಾಲನಾಗಮ್ಮನಿಗೆ ಹೇಳಿದ ಅಂಥ ಕಷ್ಟ ಕಾಲದ ಬಂದಾಗ, ಮನಸ್ಸು ದೃಢ ಮಾಡಿಕೊಳ್ಳಬೇಕು. ಶಾಂತಿಯಿಂದ ಇರಬೇಕು ಎಂದು ಹೇಳಿದೆ. ಆಗ ದೃಢವಂತೆಯಾದ ಬಾಲನಾಗಮ್ಮ ಸ್ವಾಮಿ ನನಗೆ ಯಾವ ಕಷ್ಟ ಬಂದರು ಬರಲಿ, ನಾನು ರಾಣಿಯಾಗಿದ್ದೀನಿ ಬಂಜೆತನ ಹೋದ್ರೇ ಸಾಕು ಎಂದು ಬೇಡುತ್ತಾಳೆ. ಆಗ ಇಷ್ಟೆಲ್ಲ ಮಾತು ಹೇಳಿ ಶಿವ ಮಾಯವಾಗಿ ಹೊರಟುಹೋದ. ಆಗ ಶಿವಶರಣೆ ಬಾಲನಾಗಮ್ಮ ಅರಮನೆಗೆ ಬರುತ್ತಾಳೆ. ಬಂದು ನಾಗಮ್ಮ ಗರ್ಭಿಣಿಯಾಗುತ್ತಾಳೆ. ಆರು ತಿಂಗಳ ನಂತರ ಒಂಬತ್ತು ತಿಂಗಳು ನವಮಾಸ ಆಗುತ್ತೆ. ಗಂಡು ಮಗುವಿಗೆ ಜನ್ಮ ನೀಡುತ್ತಾಳೆ ಬಾಲನಾಗಮ್ಮ. ಆಗ ಬಾಲನಾಗಮ್ಮನವರ ಅಕ್ಕಂದಿರಿಗೆ ಬಹಳ ಸಂತೋಷವಾಗುತ್ತದೆ. ಪ್ರೀತಿಯಿಂದ ಬಾಣಂತಿ ಸೇವೆ ಮಾಡುತ್ತಾರೆ. ಆಗ ಮಗು ಹುಟ್ಟಿದ ಸಮಯ ಒಳ್ಳೆದಾಗಿ ಬರಲಿಲ್ಲ, ಪುರೋಹಿತರನ್ನು ಕರೆಸಿ ಶಾಸ್ತ್ರ ಕೇಳಿದರೆ, ಅವರು ಈ ರೀತಿ ಹೇಳುತ್ತಾರೆ. ಮಗು ಹುಟ್ಟಿದ ಏಳು ದಿವಸಕ್ಕೆ ಏಳೂ ಜನ ಅಣ್ಣ ತಮ್ಮಂದಿರು ದಂಡಯಾತ್ರೆ ಹೋಗುತ್ತಾರೆ ಅಂತ ಹೇಳಿದರು. ಆಗ ಮಗುವಿಗೆ ಬಾಲವರ್ಧರಾಜ ಅಂತ ಹೆಸರನ್ನು ಇಡುತ್ತಾರೆ.

ಏಳು ಜನ ಅಣ್ಣ ತಮ್ಮಂದಿರು ದಂಡುದಾಳಿ ಕಟ್ಟಿಕೊಂಡು ಬಾಣಂತಿ ಬಾಲನಾಗಮ್ಮನನ್ನು ಬಿಟ್ಟು ಬಾಗಿಲ ಮುಂದೆ ಮೂರು ಗೆರೆ ಹಾಕಿ ಯಾರೇ ಬಂದರು ಬಾಗಿಲನ್ನು ಬಿಟ್ಟು ಬರಬೇಡ ಅಂತ ಹೇಳಿದ ಕಾರುವರ್ಧರಾಜ. ಅಂದರೆ ಇಲ್ಲಿ ಜನಪದ ರಾಮಾಯಣದಲ್ಲಿ ಸೀತೆಗೆ ಲಕ್ಷ್ಮಣ ರೇಖೆ ಹಾಕಿದಂತೆ ಕಾರುವರ್ದರಾಜ ಮೂರು ಗೆರೆಯನ್ನು ಹಾಕಿ ದಂಡು ದಾಳಿ ಕರೆದುಕೊಂಡು ಯುದ್ಧಕ್ಕೆ ಹೊರಟು ಹೋದನು. ಯುದ್ಧಕ್ಕೆ ಹೋಗಲು ಕಾರಣ ದಂಡಿಕೋಟೆ ರಾಜನಿಗೂ ಮತ್ತು ಓರುಗಲ್ಲು ರಾಜರಿಗೂ ಅಂದರೆ ಇವರ ತಾತನಿಗೂ ಮತ್ತು ಅವರ ತಾತನಿಗೂ ಹಿಂದಿನ ಕಾಲದಲ್ಲಿ ಯುದ್ಧ ನಡೆದು ದಂಡಿಕೋಟೆ ತಾತನ್ನು ಓರುಗಲ್ಲು ತಾತ ಕೊಂದಿರುತ್ತಾನೆ. ಅದಕ್ಕೆ ಇವರು ಯುದ್ಧಕ್ಕೆ ಹೋಗುತ್ತಾರೆ. ಆಗ ಯುದ್ಧಕ್ಕೆ

ಹೋಗುವಾಗ ತಳವಾರ ರಾಮಣ್ಣನನ್ನು ಕೋಟೆ ಬಾಗಿಲಲ್ಲಿ ಕಾವಲು ಇಟ್ಟು, ಏಳು ಜನ ಯುದ್ಧಕ್ಕೆ ಹೋಗುತ್ತಾರೆ. ತಳವಾರ ರಾಮಣ್ಣನಿಗೆ ಯಾರೇ ಬಂದರು ಕೋಟೆಯೊಳಕ್ಕೆ ಬಿಡಬೇಡ, ಅಂತ ಹೇಳಿ ಹೋದರು.

**೪.೫. ಮಾಯದ ಫಕೀರ ನಾಗಮ್ಮನನ್ನು ಸೆರೆಹೊಯ್ಯುವ ಪ್ರಸಂಗ**

ಪುನ್ನಾಟ ಗುಡ್ಡದಲ್ಲಿ ಮಾಯಾದ ವರಾಟಿ ಆದರೆ
ಸೂಲೆ ಚೆನ್ನಕ್ಕಳ ಕೈಲಿ ಪಗಡೆನಾದರೆ ಆಡುತಾನೆ
ಅಯ್ಯ ಪಗಡೆ ಆಟದಲ್ಲಿ ಸೋತವ್ನೆ ಮಾಯಾ ಮರಾಟಿ
ಆಗ ಪಕಪಕನೆ ನಗುತಾಳೆ ಸೂಳೆ ಚೆನ್ನಕ್ಕನಾದರೆ
ಆಗ ನೋಡುತಾನೆ ಮರಾಟಿ ಬಲುಕೋಪ ಬರುತೈತೆ
ಯಾಕೆ ಸೂಳೆ ಚೆನ್ನಕ್ಕ ನೀನು ನಗಲು ಕಾರಣವೇನು
ಸ್ವಾಮಿ ನನ್ನಂತ ರೂಪವಂತೆ ಇನ್ನೆಲ್ಲು ಇಲ್ಲವಲ್ಲ
ಆ ಮಾತ ಕೇಳುತಾನೆ ಮಂತ್ರವಾದಿ ಮಾಯಾ ಮರಾಟಿ
ಮಂತ್ರದ ದೊಣ್ಣೆ ಕೈಯಲಿ ಹಿಡಿದು ಮಾಯಾ ಮರಾಟಿ ಆಗ
ಅಯ್ಯ ಜಪಸರವ ಕೈಯಲ್ಲಿ ಹಿಡಕೊಂಡು ಮರಾಟಿ ಆಗ
ಆಗ ಜಪಸಸರವ ಹಿಡಕೊಂಡು ಚೆನ್ನಕ್ಕನಿಗೆ ಹೇಳುತಾನೆ
ನಿನಗಿಂತ ಕಡುಚಲವೆ ರೂಪವಂತೆ ತರುತೀನಿ
ಕಯ್ಯ ಕಪ್ಪನು ಸವರಿ ದೃಷ್ಟಿಯನ್ನು ತೋರುತನೆ
ಆಗ ಶಿವಶರಣೆ ಬಾಲನಾಗಮ್ಮ ಸ್ನಾನವನ್ನೆ ಮಾಡಿಕೊಂಡು
ಏಳು ಮಾಡಿ ಮೇಲೆ ನಿಂತು ಏಳುಮಾರುದ್ದ ಮಂಡೆಯ
ಏಳುಮಾರುದ್ದ ಮಂಡೆಯ ಆರಿಸಿಕೊಂಡು ನಿಂತವಳೆ
ಕಪ್ಪಿನ ತ್ರಾಣದಿಂದ ಬಾಲನಾಗಮ್ಮ ಕಾಣುತವಳೆ ಕಣ್ಣಿಗೆ
ಕಪ್ಪಿನ ಪ್ರಾಣವನೋಡಬೇಕು ಮಹೇಂದ್ರಜಾಲವನೋಡಬೇಕು
ಎಂಬ ಮಾತನು ಕೇಲಿ ಮರಾಟ ಕೋಪನಾದರೆ ತಾಳೀಕೊಂಡ
ಆಗ ನೋಡೆ ನೋಡೆ ಚೆನ್ನಕ್ಕ ನೀನು

ಈಗ ಈ ರೂಪವತಿಯ ನಾನು ತರಬೇಕು
ನಾಳೆ ಸಂಜೆ ಆರುಗಂಟೆ ಒಳಗೆ ತರದಿದ್ರೆ
ಮಾಯಾ ಮರಾಟಿ ಎಂದೊ ಹೆಸರನಾದರೆ ಕರಿಬೇಡಿ
ಎಂಬ ಪಂತವ ಮಾಡಿಕೊಂಡು ಮಾಯಾಮರಾಟಿ ಹೊರಟನು
ಅಯ್ಯ ಸನ್ಯಾಸಿ ಯಾಸವ ಹಾಕಿಕೊಂಡು ಹೊರಟನು
ಅಯ್ಯ ಮುದುಕ ಜಂಗಮನಾಗಿ ಹೊರಟನು
ಆಗ ಶಂಕುಚಕ್ರವ ಹಿಡಕಂಡು ಹೊರಟನೆ ಮಂತ್ರವಾದಿ
ಆಗ ಕೋಟೆ ಬಾಗಲಲ್ಲಿ ನಿಂತಿದ್ದ ರಾಮಣ್ಣನ ಕಂಡ
ಮುದಿಯ ಜಂಗಮನ ತಡೆದ ರಾಮಣ್ಣನಾಗ
ಅಯ್ಯ ಏಳಜನ ರಾಜರಿಲ್ಲ ಪಟ್ಟಣಕೆ ನೀ ಹೋಗಬೇಡ
ನನಗೆ ರಾಜರ ಅಪ್ಪಣೆ ಆಗ್ಯೆತೆ ಎಂದನಾಗ
ಅಂತಪ್ಪ ಮಾತ ಕೇಲಿ ಮಾಯಾ ಮರಾಟಿ ತಾನು
ಆಗ ಕೇಲೊ ಕೇಲೋ ನಿನಗಿಬ್ಬರು ಮಡದೀರು
ಅಯ್ಯ ಒಬ್ಬರಿಗೂ ಮಕ್ಕಳಿಲ್ಲ ಬಾಳಯೋಚನೆ ಮಾಡುತೀಯ
ಬೇಡಿದವರಿಗೆ ಬೇಡಿದಂಥ ಮಕ್ಕಳ ಕೊಡುವ ಶಿವನು ನಾನು
ಎಂದು ಮೂರಡಿ ವಿಭೂತಿಯೆತ್ತಿ ಕೈಯಿಗಾದರೆ ಕೊಡುತಾನೆ
ಎಲವೊ ಮಕ್ಕಳ ಸಂತಾನವಾಗುತ್ತದೆ ಮನೆಗೆ ನೀ ಹೋಗಯ್ಯ
ಅಯ್ಯ ಇಬ್ಬರು ಮಡದಿಯರ ಕೈಗೆ ವಿಭೂತಿಯ ಕೊಟ್ಟುಬಿಡು
ಅಯ್ಯ ಮಕ್ಕಳಾಗುತಾವೆ ಎಂಬ ಮಾತು ಕೇಳಿ ತಳವಾರ ರಾಮಣ್ಣ
ಮೂರಿಡಿ ಈಭೂತಿಯ ಈಸಿಕೊಂಡ ರಾಮಣ್ಣ
ಅಯ್ಯ ಓಡಿ ಓಡಿ ಹೋಗುತಾನೆ ಕೋಟೆ ಬಾಗಿಲ ಬಿಟ್ಟುಬಿಟ್ಟೆ
ಅಯ್ಯ ಪೆಂಡತಿರ ಕೈಗೆ ಕೊಡುತಾನೆ ಭಸ್ಮವನು ರಾಮಣ್ಣ
ನೂರ್ಹತ್ತು ಜನ ಮಕ್ಕಳಾದರು ತಳವಾರ ರಾಮಣ್ಣನಿಗೆ
ಅಯ್ಯ ಪೇಟೆಯೊಳಗೆ ಹೋಗುತಾನೆ ಜಂಗುಮಯ್ಯನಾದರಾಗ
ಹಿರಿಯ ನಾಗವ್ವನ ಮನೆಗೆ ಬಂದನು ಜಂಗುಮಯ್ಯ

ಭವತಿ ಭಿಕ್ಷಾಂದೇಹಿ ಎಂದು ಶಂಕಿನ ಕೂಗ ಹಾಕಿದಾನು
ಅಯ್ಯ ಮುತ್ತೀನ ಮರದಲ್ಲಿ ಹಿರಿಯ ನಾಗವ್ವ ಬೇಗ
ಭಿಕ್ಷಾವ ತಂದಿದ್ದಾಳೆ ನೋಡುತಾನೆ ಮಾಯಾ ಮರಾಠಿ
ಬಂಜೆ ಕೈಯಲಿ ಭಕ್ಷಾವನ್ನು ಈಸಿಕೊಳ್ಳಲು ಸಾಧ್ಯವಿಲ್ಲ
ಬಂಜೆ ಎಂಬ ಮಾತಕೇಳಿ ಹಿರಿಯ ನಾಗವ್ವ ತಾನು
ಮೊರವ ನೆಲಕ್ಕೆ ಹಾಕಿ ಮಂಚಕ್ಕೆ ಮಕಾಡೆ ಮಲಗಿಕೊಂಡ್ಲು
ಆಗ ಆರೂ ಜನ ಅಣ್ಣದೀರ ಮನೆಯ ಮುಂದೆ ಬರುತಾನೆ
ಅಯ್ಯ ಆರು ಜನ ಬಂಜೆದೀರು ಎಂಬ ಮಾತು ಹೇಲುತಾನೆ
ಭಿಕ್ಷಕೆ ಬಂದ ಜಂಗಮಯ್ಯ ಬಂಜೆದೀರು ಎಂದನಲ್ಲ
ಧರಣಿ ಶೋಕ ಮಾಡಿಕೊಂಡು ಮಲಗವರೆ ಮಂಚದ ಮೇಳೆ
ಆಗ ಕಿರಿಯವಳೆ ಬಾಲನಾಗಮ್ಮ ಮನೆಬಾಗಲಿಗೆ ಬಂದುನಿಂತ
ಭವತಿ ಭಿಕ್ಷಾಂದೇಹಿ ಎಂದು ಶಂಖ ಊದಿದನು
ದಾದಿಯರ ಕೈಯಲ್ಲಿ ಭಿಕ್ಷವ ಕಳಿಸ್ತಾಳೆ ಬಾಲನಾಗಮ್ಮ
ದಾದಿಯರ ಕೈಯಲಿ ಭಿಕ್ಷವಾದರೆ ಬೇಡವಮ್ಮ ನನಗೆ
ಅಮ್ಮ ನಿಮ್ಮ ರಾಣಿ ಬಾಲನಾಗಮ್ಮ ಭಿಕ್ಷವಾದರೆ ನೀಡಬೇಕು
ಬಾಲನಾಗಮ್ಮ ಭಿಕ್ಷವನ್ನು ನೀಡಬೇಕು ಎಂದು ಹೇಳಿ
ಹಿಂದಕ್ಕಾದರೆ ಕಳಿಸಿಬಿಟ್ಟ ಮುದಿಯ ಜಂಗಮ
ದಾದೀರು ಒಳಗೆ ಹೋಗಿ ಈ ಮಾತ ತಿಳಿಸುತ್ತಾರೆ
ಆಗ ಮುತ್ತಿನ ಮರದಲ್ಲಿ ಶಿವಶರಣೆ ಬಾಲನಾಗಮ್ಮ
ಪತಿಯ ಆಜ್ಞೆ ಮೀರಿ ನಾನು ಬಾಗಿಲು ದಾಟಿ ಹೋಗೋದಿಲ್ಲ
ಅಂತಪ್ಪ ಮಾತ ಕೇಳಿ ಮಾಯ ಮರಾಠಿ ತಾನು
ಮನೆಯ ಬಾಗಿಲಿಗೆ ಬಂದಿದ್ದೀನಿ ಇಂತ ಮಾತ ಹೇಳಬಹುದೆ
ಪತಿವ್ರತೆಯಮ್ಮ ನೀನು ಭಕ್ಷವಾದರೆ ನೀಡಬೇಕು
ಅಮ್ಮ ಪತಿಬರೆದ ಗೆರೆಯ ದಾಟಿ ಹೊರಗೆ ಬಂದು ಭಿಕ್ಷ ನೀಡು
ಜಂಗಮಮಯ್ಯನ ಮಾತ ಕೇಳಿ ಶಿವಶರಣೆ ಬಾಲನಾಗಮ್ಮ

ಪತಿಬರೆದ ಗೆರೆ ದಾಟಿ ಹೊರಗಾದರೆ ಬರುತಾಳೆ
ಅಯ್ಯ ಮುತ್ತಿನ ಜೋಳಿಗೆ ಭಿಕ್ಷವನ್ನು ನೀಡುತಾಳೆ ಬಾಲನಾಗಮ್ಮ
ಅಯ್ಯ ಮುತ್ತಿನ ಜೋಳಿಗೆಯಲಿ ಭಿಕ್ಷವನಾದರು ನೀಡುತಾಳೆ
ನೀಡುವ ವೇಳೆಯಲ್ಲಿ ತೊಟ್ಟಿಲ ಮಗುವು ಕಿಟ್ಟನಾದರೆ ಕಿರುಚೀತು
ಶಿವಶರನೆ ಬಾಲನಾಗಮ್ಮ ಭಿಕ್ಷವನಾದರೆ ನೀಡಿಬಿಟ್ಟು
ಜಂಗಮರ ಪಾದಕೆ ಶರಣ ಮಾಡೋಕೆ ಬಗ್ಗುತಾಳೆ
ಮಂತ್ರದ ದೊಣ್ಣೆ ತಲೆಮೇಲೆ ಮಡಗಿಬಿಟ್ಟ ಮಂತ್ರವಾದಿ
ಅಯ್ಯ ಕರಿಜೂಲು ನಾಯಿಯಾಗಿ ಆಗಿಬಿಟ್ಟಾಳೊ ಬಾಲನಾಗಮ್ಮ
ಕರಿಜೂಲು ನಾಯಿಯಾಗಿ ಓಡಿಬಿಟ್ಟಿತು ಆ ನಾಯಿ ಒಳಗೀಗ
ತೊಟ್ಟಿಲ ಮೇಲಕೆ ಹತ್ತುತ್ತೈತೆ ಮಗುವಿನ ಮುಖವ ನೆಕ್ಕುತ್ತೈತೆ
ಏಳುಜನ ದಾದೀರು ಬರಲು ತಕ್ಕೊಂಡು ಓಡಿಸಿಕೊಂಡು ಬರುತಾರೆ
ಓಡಿಬಂದ ನಾಯನ್ನು ಹಿಡಿದುಕೊಂಡಾನು ಮುದಿಯ ಜಂಗಮನು
ನಾಯನು ಹಿಡಕೊಂಡು ಹೊರಟಾನು ಮಂತ್ರವಾದಿ ಗುಡ್ಡಾಕೆ
ಆಗ ತಳವಾರ ರಾಮಣ್ಣನ ಮನೆಯಲ್ಲಿ ನೂರಹತ್ತು ಜನ ಮಕ್ಕಳು
ಅಯ್ಯ ಇದ್ದಕ್ಕಿದ್ದಂಗೆ ಮಾಯವಾದವು ನೂರು ಹತ್ತು ಮಕ್ಕಳು
ನೋಡುತಾನೆ ತಳವಾರ ರಾಮಣ್ಣ ಓಡಿಬಂದು ಕೋಡೆ ಬಾಗಿಲಿಗೆ
ಅಯ್ಯ ಊರಲ್ಲೆಲ್ಲ ಗಲಗಾಯಿತು ಬಾಲನಾಗಮ್ಮ ಕಾಣಲಿಲ್ಲ

ಜನಪದ ರಾಮಾಯಣದಲ್ಲಿ ಇಂತಹ ಪ್ರಸಂಗ ಬರುತ್ತದೆ. ಅದು ಸೀತಾದೇವಿಯನ್ನು ರಾವಣನು ಸೆರೆ ಹೊಯ್ಯುವ ಸಂದರ್ಭವನ್ನು ಕಾಣಬಹುದು. ಅದರಂತೆ ಈ ಬಾಲನಾಗಮ್ಮ ಕಾವ್ಯದಲ್ಲಿ ಮಾಯದ ಫಕೀರನು ನಾಗಮ್ಮನನ್ನು ಸೆರೆಹೊಯ್ಯುವಂತಹ ಸಂದರ್ಭ ಇಲ್ಲಿ ಕಾಣಬಹುದಾಗಿದೆ. ಪುನ್ನಾಟ ಗುಡ್ಡದಲ್ಲಿ ಮಾಯದ ಫಕೀರನು ಸೂಳೆ ಗಾಣಿಗರ ಚೆನ್ನಕ್ಕನ ಜೊತೆ ಪಗಡೆ ಆಟ ಆಡುತ್ತಿರುತ್ತಾನೆ. ಈ ಆಟದಲ್ಲಿ ಅವನು ಸೋತನು. ಆಗ ಸೂಳೆ ಚೆನ್ನಕ್ಕ ನಗುತ್ತಿರುತ್ತಾಳೆ. ಆಗ ಮಾಯದ ಫಕೀರನಿಗೆ ಬಲು ಕೋಪ ಬರುತ್ತದೆ. ಅವನು ಯಾಕೆ ನೀನು ನಗುತ್ತೀಯ, ನೀನು ನಗಲು ಕಾರಣವೇನು ಎಂದು ಕೇಳಿದ. ಆಗ ಸೂಳೆ ಚೆನ್ನಕ್ಕ ಸ್ವಾಮಿ ನನ್ನಂತ ರೂಪವಂತೆ ಎಲ್ಲಿ ಇಲ್ಲವಲ್ಲ ಎಂದಳು. ಈ ಮಾತನ್ನು ಕೇಳಿದ ಮಾಯದ ಫಕೀರ ಮಂತ್ರದ ದೊಣ್ಣೆಯನ್ನು ಕೈಯಲ್ಲಿ ಹಿಡಿದುಕೊಂಡು ಜಪದ ಸರವನ್ನು

ಹಿಡಿದುಕೊಂಡು ನಿನಗಿಂತ ಸುಂದರವಾದ ಚೆಲುವೆಯನ್ನು ತರುತ್ತೇನೆ ಎಂದು ಕೈಗೆ ಕಾಡಿಗೆಯನ್ನು ಸವರಿಕೊಂಡು ದೃಷ್ಟಿಯಿಂದ ನೋಡುತ್ತಾನೆ. ಆಗ ಶಿವಶರಣೆ ಬಾಲನಾಗಮ್ಮ ಸ್ನಾನ ಮಾಡಿಕೊಂಡು, ಏಳು ಮಾಡಿ ಮೇಲೆ ನಿಂತು, ಏಳು ಮಾರುದ್ದ ಮಂಡೆಯ (ತಲೆಯ ಕೂದಲು)ನ್ನು ಆರಿಸಿಕೊಳ್ಳುತ್ತಾ ನಿಂತಿರುತ್ತಾಳೆ. ಕಪ್ಪಿನ ತ್ರಾಣದಿಂದ ಬಾಲನಾಗಮ್ಮ ಮಾಯದ ಫಕೀರನಿಗೆ ಕಾಣುತ್ತಿರುತ್ತಾಳೆ. ಆಗ ಸೂಳೆ ಚೆನ್ನಕ್ಕನನ್ನು ಕರೆದು ನೋಡೆ ಚೆನ್ನಕ್ಕ ನಿನಗಿಂತ ಈ ರೂಪವತಿಯನ್ನು ನಾಳೆ ಸಂಜೆ ಆರು ಗಂಟೆಯೊಳಗೆ ನಾನು ತರದೆ ಹೋದರೆ ನನ್ನ ಮಾಯದ ಫಕೀರ ಅಂತ ಕರಿಯಲೇಬೇಡ ಅಂತ ಹೇಳಿದ. ಈ ರೀತಿ ಹೇಳಿ ಪ್ರತಿಜ್ಞೆ ಮಾಡಿ ಮಾಯದ ಫಕೀರ ಸನ್ಯಾಸಿ ವೇಷವನ್ನು ಧರಿಸಿಕೊಂಡು, ಮುದುಕ ಜಂಗಮನಾಗಿ ಹೊರಟ. ಕೈಯಲ್ಲಿ ಶಂಕುಚಕ್ರವನ್ನು ಹಿಡಕೊಂಡು ಹೊರಟ ಮಂತ್ರವಾದಿ. ಆಗ ಕೋಟೆ ಬಾಗಿಲಲ್ಲಿ ನಿಂತಿದ್ದ ರಾಮಣ್ಣ ಮುದಿಯ ಜಂಗಮನನ್ನು ತಡೆದ. ತಡೆದು ಏಳು ಜನ ರಾಜರಿಲ್ಲ, ಪಟ್ಟಣಕ್ಕೆ ನೀ ಹೋಗಬೇಡ, ನನಗೆ ರಾಜರ ಅಪ್ಪಣೆ ಆಗಿದೆ ಎನ್ನುತ್ತಾನೆ. ಆಗ ಮಾಯದ ಫಕೀರ ನಿನಗೆ ಇಬ್ಬರು ಮಡದಿಯರು ಇರುವರು. ಅವರಿಗೆ ಮಕ್ಕಳು ಆಗದೆ ನಿನಗೆ ಬಹಳ ಯೋಚನೆ ಆಗಿದೆ. ನಾನು ಬೇಡಿದವರಿಗೆ ಬೇಡಿದಂಥ ಮಕ್ಕಳ ಕೊಡುವ ಶಿವನು ಎನ್ನುತ್ತಾನೆ. ಆಗೆ ಹೇಳುತ್ತಾ ತಳವಾರ ರಾಮಣ್ಣನ ಕೈಯಲ್ಲಿ ಮೂರು ಹಿಡಿ ವಿಭೂತಿ ಕೈಗೆ ತೆಗೆದುಕೊಂಡು ರಾಮಣ್ಣನ ಕೈಗೆ ಕೊಡುತ್ತಾನೆ. ಇದನ್ನು ತೆಗೆದುಕೊಂಡು ಹೋಗಿ ನಿನ್ನ ಹೆಂಡತಿಯರ ಕೈಯಲ್ಲಿ ಕೊಡು, ನಿನಗೆ ಮಕ್ಕಳಾಗುತ್ತದೆ ಎಂದು ಹೇಳಿದ. ಇದನ್ನು ತಿಳಿದ ರಾಮಣ್ಣ ಕೋಟೆ ಬಾಗಿಲು ಬಿಟ್ಟು ಓಡಿ ಹೋಗುತ್ತಾನೆ. ಮನೆಗೆ ಹೋಗಿ ಭಸ್ಮವನ್ನು ಹೆಂಡತಿಯರ ಕೈಯಲ್ಲಿ ಕೊಡುತ್ತಾನೆ. ಆಗ ನೂರು ಹತ್ತು ಜನ ಮಕ್ಕಳಾಗುತ್ತಾರೆ. ಆಗ ಪೇಟೆಯೊಳಗೆ ಮಾಯದ ಫಕೀರ ಹೋಗುತ್ತಾನೆ. ಹಿರಿಯ ನಾಗವ್ವನ ಮನೆಗೆ ಬಂದನು. ಜಂಗಮಯ್ಯ ಬಂದು ಭವತಿ ಭಿಕ್ಷಾಂದೇಹಿ ಎಂದು ಸಂಕಿನಿಂದ ಕೂಗಿದ. ಆಗ ಹಿರಿಯ ನಾಗವ್ವ ಮುತ್ತಿನ ಮರದಲ್ಲಿ ಭಿಕ್ಷೆ ತರುತ್ತಾಳೆ. ಆಗ ಮಾಯದ ಫಕೀರ ಅದನ್ನು ನೋಡಿ ನಾನು ಬಂಜೆ ಕೈಯಲ್ಲಿ ಭಿಕ್ಷವನ್ನು ತೆಗೆದುಕೊಳ್ಳುವುದಿಲ್ಲ ಎಂದನು. ಆಗ ಬಂಜೆ ಎಂಬ ಮಾತು ಕೇಳಿ ಹಿರಿಯ ನಾಗಮ್ಮ ಮುಖವನ್ನು ನೆಲಕ್ಕೆ ಹಾಕಿಕೊಂಡು ಒಳಗೆ ಹೋದಳು. ಆಗ ಆರು ಜನ ಅಣ್ಣಂದಿರ ಮನೆಯ ಮುಂದೆ ಬರುತ್ತಾನೆ. ಆರು ಜನರಿಗೂ ಬಂಜೆ ಎಂದು ಹೇಳಿ ಬಾಲನಾಗಮ್ಮನ ಮನೆ ಬಾಗಿಲಿಗೆ ಬಂದು ನಿಂತು ಭವತಿ ಭಿಕ್ಷಾಂದೇಹಿ ಎಂದು ಶಂಕ ಊದಿದನು. ಆಗ ಬಾಲನಾಗಮ್ಮ ದಾದಿಯರ ಕೈಯಲ್ಲಿ ಭಿಕ್ಷೆ ಕಳಿಸುತ್ತಾಳೆ. ಆಗ ಮಾಯದ ಫಕೀರ ನಿಮ್ಮ ಕೈಯಲ್ಲಿ ನನಗೆ ಭಿಕ್ಷೆ ಬೇಡ ನಿಮ್ಮ ರಾಣಿ ಬಾಲನಾಗಮ್ಮ ಭಿಕ್ಷೆ ನೀಡಬೇಕು ಎಂದನು. ದಾದಿಯರು ಬಂದು ಬಾಲನಾಗಮ್ಮನಿಗೆ

ಹೇಳುತ್ತಾರೆ. ನೀನೆ ಹೋಗಬೇಕಂತಮ್ಮ ಎಂದರು. ಆಗ ಬಾಲನಾಗಮ್ಮ ಮುತ್ತಿನ ಮರದಲ್ಲಿ ಭಿಕ್ಷೆ ತೆಗೆದುಕೊಂಡು ಹೋಗುತ್ತಾಳೆ. ಬಾಲನಾಗಮ್ಮ ಪತಿಯ ಆಜ್ಞೆಯನ್ನು ಮೀರುವುದಿಲ್ಲ. ಬಾಗಿಲನ್ನು ದಾಟುವುದಿಲ್ಲ. ಆಗ ಮಾಯದ ಫಕೀರ ಪತಿ ಬರೆದ ಗೆರೆಯ ದಾಟಿ ಹೊರಗೆ ಬಂದು ಭಿಕ್ಷೆ ಹಾಕಮ್ಮ ಎಂದು ಹೇಳಿದ. ಆಗ ಬಾಲನಾಗಮ್ಮ ತನ್ನ ಪತಿ ಬರೆದ ಮೂರು ಗೆರೆ ದಾಟಿ ಭಿಕ್ಷೆ ಹಾಕುತ್ತಾಳೆ. ತೊಟ್ಟಿಲಲ್ಲಿ ಇರುವಂತ ಮಗು ಕಿರುಚುತ್ತದೆ. ಭಿಕ್ಷೆ ನಿಡಿ ಜಂಗಮನ ಪಾದಕ್ಕೆ ಶರಣು ಮಾಡೋಕೆ ಬಗ್ಗುತ್ತಾಳೆ. ಮಂತ್ರದ ದೊಣ್ಣೆಯನ್ನು ತಲೆ ಮೇಲೆ ಇಟ್ಟು ಮಂತ್ರವಾದಿ. ಆಗ ಬಾಲನಾಗಮ್ಮ ಕರಿಜೂಲು ನಾಯಿಯಾದಳು. ನಾಯಿಯಾಗಿ ಬಾಲನಾಗಮ್ಮ ಮಗುವಿನ ಮುಖ ನೋಡುತ್ತಾಳೆ. ಅಂದರೆ ಅಲ್ಲಿ ತಾಯಿ ಮಗುವನ್ನು ದೂರ ಮಾಡುವಂತಹ ಪ್ರಸಂಗ ಬರುವಂತಹದ್ದು ಇಲ್ಲಿ ಕಾಣಬಹುದು. ಆಗ ತಳವಾರ ರಾಮಣ್ಣ ಮನೆಯಲ್ಲಿ ನೂರಹತ್ತು ಜನ ಮಕ್ಕಳು ಇದ್ದಕ್ಕಿದ್ದಂತೆ ಮಾಯವಾದರು. ಆಗ ತಳವಾರ ರಾಮಣ್ಣ ಓಡಿ ಬಂದು ಕೋಟೆ ಬಾಗಿಲ ಬಳಿ ನಿಂತ. ಬಾಲನಾಗಮ್ಮನ ಆರು ಜನ ಅಕ್ಕಂದಿರು ರಾಮಣ್ಣನ ಬಳಿ ಬರುತ್ತಾರೆ. ಬಂದು ಬಾಲನಾಗಮ್ಮ ಕಾಣುತ್ತಿಲ್ಲ. ನೀನು ದಂಡಿನ ಬಳಿಗೆ ಹೋಗಿ ಸುದ್ದಿ ತಿಳಿಸು ಎಂದರು. ರಾಮಣ್ಣ ಆಯಿತು ಎಂದು ಹೇಳಿ ಹೊರಟ. ಹೋಗಿ ಏಳು ಜನ ರಾಜರಿಗೆ ಈ ಸುದ್ದಿಯನ್ನು ತಿಳಿಸುತ್ತಾನೆ. ಈ ಸುದ್ದಿಯನ್ನು ತಿಳಿದ ಏಳು ಜನ ರಾಜರು ಪುನ್ನಾಟ ಗುಡ್ಡದ ಮಂತ್ರವಾದಿಯೇ ಈ ಕೆಲಸವನ್ನು ಮಾಡಿರುವನು. ಅಂತಹ ಕೆಲಸ ಮಾಡುವರು ಯಾರಿದ್ದಾರೆ ಎಂದು ಹೇಳಿ ಆಗ ಅವನ ಪುನಾಟ ಗುಡ್ಡಕ್ಕೆ ಸೈನ್ಯವನ್ನು ತೆಗೆದುಕೊಂಡು ಹೋದರು. ಆಗ ಮಾಯದ ಫಕೀರ ಬಾಲನಾಗಮ್ಮನಿಗೆ ನಿಜವಾದ ರೂಪವನ್ನು ಕೊಡುತ್ತಾನೆ. ಆಗ ಬಾಲನಾಗಮ್ಮ ಇದು ತನ್ನ ಅರಮನೆಯಲ್ಲವಲ್ಲ ಎಂದು ಮಂತ್ರವಾದಿಯನ್ನು ಬಾಯಿಗೆ ಬಂದಂಗೆ ಬೈಯುತ್ತಾಳೆ. ತಾಯಿ ಮಗುವನ್ನೇ ಬೇರೆ ಮಾಡಿದ ಪಾಪಿಗೇಡಿ ಎಂದು ಕಣ್ಣಲ್ಲಿ ನೀರು ಹಾಕುತ್ತಾಳೆ. ಆಗ ಅಲ್ಲಿಗೆ ಏಳು ಜನ ಅಣ್ಣತಮ್ಮಂದಿರ ಶಬ್ದವಾಯಿತು. ಈ ಶಬ್ದವನ್ನು ಕೇಳಿದ ಮಂತ್ರವಾದಿ ಬಾಲನಾಗಮ್ಮನನ್ನು ಅವರ ಎದುರು ನಿಲ್ಲಿಸುತ್ತಾನೆ. ಆಗ ಬಾಲನಾಗಮ್ಮನಿಗೆ ಗಂಡನನ್ನು ನೋಡಿ ಧೈರ್ಯ ಬರುತ್ತದೆ. ಇದನ್ನು ನೋಡಿದ ಮಂತ್ರವಾದಿ ಮಂತ್ರದ ದೊಣ್ಣೆ ನೆಲಕ್ಕೊಡೆದು ಕರಿಯ ಗುಡ್ಡ ಮಾಡಿದನು. ಗಂಡ ಮಾವಂದೀರು ಎಲ್ಲ ಕರಿಯ ಗುಡ್ಡವಾಗಿ ನಿಂತರು. ಮಾಯದ ಫಕೀರ ಸಂತೋಷ ಪಡುತ್ತಾನೆ. ಮತ್ತೆ ಈಗ ನೋಡೆ ಬಾಲನಾಗಿ ನಾ ಹೇಳಿದಂತೆ ಕೇಳಿದಿದ್ರೆ ನಿನ್ನ ಗಂಡ ಮಾವಂದಿರನ್ನು ಸಾಯಿಸುತ್ತೀನಿ ಎಂದ. ಆಗ ಬಾಲನಾಗಮ್ಮ ದುಃಖಪಡುತ್ತ ಸಣ್ಣ ಮಗುವನ್ನು ಮನೆಯಲ್ಲಿ ಬಿಟ್ಟು ಬಂದೆ, ನನ್ನನ್ನು ಯಾರು ಕರೆದುಕೊಂಡು ಹೋಗುತ್ತಾರೆ ಎಂದು ಗಟ್ಟಿ ಧೈರ್ಯಮಾಡಿ ಬಾಲನಾಗಮ್ಮ ಸ್ವಾಮಿ

ನೀನೇ ಗಂಡ, ನಾನೇ ಹೆಂಡತಿ. ನನ್ನದು ಒಂದು ಮಾತಿದೆ ಎಂದಳು. ಆಗ ಮಂತ್ರವಾದಿ ಎಂಥಾ ಮಾತು ಕೇಳೆ ಬಾಲನಾಗಿ ಹೇಳುವೆ ಎಂದ. ಆಗ ಬಾಲನಾಗಮ್ಮ ಸ್ವಾಮಿ ನಿತ್ಯ ಗೌರಿ ಪೂಜೆಯನ್ನು ಮಾಡಬೇಕು ಮನೆಯಲ್ಲಿ ಮಗುವನ್ನು ಪಡೆಯುವಾಗ ಶಿವನಿಗೆ ಭಾಷೆಯನ್ನು ಕೊಟ್ಟಿದ್ದೇನೆ ಎಂದಳು. ಮಗು ಹುಟ್ಟಿದ ಹನ್ನೆರಡು ವರ್ಷ ಪತಿಯ ಹಾಸಿಗೆ ತುಳಿಯಾಕಿಲ್ಲ ಎಂದು ಹನ್ನೆರಡು ವರ್ಷ ಆದ ಮೇಲೆ ನಾನೇ ಹೆಂಡತಿ, ನೀನೆ ಗಂಡ ಎಂದಳು. ಅದಕ್ಕೆ ಒಪ್ಪಿಕೊಂಡ ಮಂತ್ರವಾದಿ ಮಂಗಳ ಗೌರಿ ಪೂಜೆಗೆ ಇತ್ಯ ಹೂವು ತರುವುದಕ್ಕೆ ಹೂವಾಡಿಗರ(ಜೀರರ) ಸುಬ್ಬಮ್ಮನನ್ನು ನೇಮಿಸಿದ.

ಆಗ ಒಂದು ವರ್ಷವಾಯಿತು, ಎರಡು ವರ್ಷವಾಯಿತು, ಮೂರು ವರ್ಷವಾಯಿತು. ಐದು ವರ್ಷದ ಮಗನಾದ ಬಾಲವರ್ಧರಾಜ ಅವನನ್ನು ಅವನ ದೊಡ್ಡಮ್ಮಂದಿರು ಭೂಮಿಗೆ ಬಿಡದಂತೆ ಸಾಕುತ್ತಾರೆ. ಅಲ್ಲಿಗೆ ಎಂಟುವರ್ಷದ ಮಗನಾದ ಬಾಲವರ್ಧರಾಜ ಒಂಭತ್ತು ವರ್ಷ ತುಂಬಿತು. ಹತ್ತು ವರ್ಷವಾಯಿತು. ಹುಡುಗರ ಜೊತೆಯಲ್ಲಿ ಗೋಲಿ, ಬುಗುರಿ ಆಡುತ್ತಾನೆ. ಪ್ರತಿದಿನ ಗೆಲುವ ಆಟವೇ ಬಾಲವರ್ಧರಾಜನದಾಗಿರುತ್ತದೆ. ಒಂದು ದಿನ ಬಡ ಹೆಣ್ಣು ಮಗಳೊಬ್ಬಳು ಮಣ್ಣಿನ ಗಡಿಗೇಲಿ ನೀರು ಹೊತ್ತುಕೊಂಡು ಹುಡುಗರೆಲ್ಲ ಆಡುತ್ತಿರುವ ದಾರಿಯಲ್ಲಿ ಬರುತ್ತಾಳೆ. ಆಗ ಬಾಲವರ್ಧನ ಜೊತೆ ಇರುವ ಹುಡಗರೆಲ್ಲ ಗಡಿಗೆಯನ್ನು ಹೊಡೆದು ಬಿಡು ಎಂದರು. ಅದಕ್ಕೆ ಬಾಲವರ್ಧನನು ಗೋಲಿಯನ್ನು ತೆಗೆದುಕೊಂಡು ಒಡೆಯುತ್ತಾನೆ. ಗಡಿಗೆ ತೂತು ಬಿತ್ತು. ನೀರು ಚೆಲ್ಲಿ ಹೋಗುತ್ತದೆ. ಆಗ ಆ ಬಡ ಹೆಣ್ಣು ಮಗಳು ಯಾರು ನನ್ನ ಗಡಿಗೆ ಒಡೆದವರು ಎಂದಳು. ಅದಕ್ಕೆ ಹುಡುಗರೆಲ್ಲ ನಾವು ಅಲ್ಲ, ಬಾಲನಾಗಮ್ಮನ ಮಗ ಬಾಲವರ್ಧನನು ಹೊಡೆದನು ಎಂದರು. ಅದಕ್ಕೆ ಆ ಹೆಣ್ಣುಮಗಳು ಹಂಗಿಸಿದಳು. ಅಯ್ಯೊ ತಬ್ಬಲಿಗೆ ತಲೆಯಿಲ್ಲ, ಮಾತು ಗೊಬ್ಬಳಿಗಿ ಮೈಯೆಲ್ಲ ಮುಳು ಎಂದು ಹಿಂಗೆ ಇರುವುದಿರಂದ ನಿನ್ನ ತಾಯಿಯನ್ನು ಮಂತ್ರವಾದಿ ಹೊತ್ಕೊಂಡು ಹೋದ ಎಂದಳು. ಬಾಯಿಗೆ ಬಂದಂತೆ ಬೈಯುತ್ತಾಳೆ. ಈ ಎಲ್ಲಾ ಮಾತನ್ನು ಕೇಳಿಸಿಕೊಂಡು ಮನೆಗೆ ಬಂದ ಬಾಲವರ್ಧರಾಜ ಮನೆಗೆ ಬಂದು ಮಂಚಕ್ಕೆ ಮುಖ ಕೊಟು ಮಲಗಿದನು. ಆರು ಜನ ದೊಡ್ಡವ್ವದೀರು ಬಂದು ಹಿಂಸೆ ಮಾಡುತ್ತಾರೆ. ಕಂದ ಏಳಪ್ಪಾ ಊಟ ಮಾಡು. ಸ್ನಾನ ಮಾಡು ನಿನ್ನ ಯಾರಾದರೂ ಬೈದರೇನೋ ಹೇಳು ಎಂದರು. ಅಮ್ಮ ನನ್ನ ಯಾರು ಬೈಯಲಿಲ್ಲ, ಯಾರು ಹೊಡೆಯಲಿಲ್ಲ. ಅಮ್ಮ ನಿಜವಾದ ಹೆತ್ತತಾಯಿ ಯಾರು ನನಗೆ ಹೇಳಿರಮ್ಮ ಎಂದು ಹೇಳಿದ. ನನ್ನ ನಿಜವಾದ ತಾಯಿ ಯಾರೆಂದು ಹೇಳುವವರೆಗೂ ನಾ ಊಟ ಮಾಡುವುದಿಲ್ಲ ಎಂದನು. ಆಗ ಅವನ ದೊಡ್ಡಮ್ಮನವರು ನಿಮ್ಮ ತಾಯಿಯನ್ನು ಮಂತ್ರವಾದಿ ಹೊತ್ತುಕೊಂಡು ಹೋಗಿ ಹತ್ತು ವರ್ಷವಾಯಿತು. ನಿಮ್ಮ ತಾಯಿಯನ್ನು

ಹುಡುಕಿಕೊಂಡು ಹೋದವರು ಕರಿಯಕಲ್ಲು ಗುಡ್ಡವಾಗಿ ಬಿದ್ದವರೆ ನನ್ನ ಕಂದ ಎಂದರು. ಈ ಮಾತನ್ನು ಕೇಳಿದ ಬಾಲವರ್ಧರಾಜ ನಾನು ಇಲ್ಲಿ ಇರುವುದಿಲ್ಲ, ನಾಳೆ ನಾನು ಹೊರಡುತೀನಿ, ರೊಟ್ಟಿ ಬುತ್ತಿ ಮಾಡಿಕೊಡಿ ಎಂದನು. ಆರು ಜನ ದೊಡ್ಡಮ್ಮನವರು ಎಷ್ಟು ಬೇಡಿಕೊಂಡರು ಕೇಳಲಿಲ್ಲ. ಆಗ ಜೊತೆಗೆ ತಳವಾರ ರಾಮಣ್ಣನನ್ನು ಕರೆದುಕೊಂಡು ಹೋಗು ಎಂದರು. ಆಗ ಮನೆಯ ಮುಂದೆ ಮಲ್ಲಿಗೆ ಗಿಡ ನೆಡುತ್ತಾನೆ. ಆರು ಜನ ದೊಡ್ಡಮ್ಮನವರಿಗೆ ಹೇಳಿಕೊಟ್ಟ ಅದೇನೆಂದರೆ ಅಮ್ಮ ಮಲ್ಲಿಗೆ ಗಿಡ ಒಣಗಿದ ದಿವಸ ನಾನು ಸತ್ತು ಹೋದೆ ಎಂದು ಕೊಳ್ಳಿ. ಮಲ್ಲಿಗೆ ಗಿಡ ಚಿಗರಿದ್ರೆ ನಾನು ಮಾತ್ರ ಸಾಹೋದಿಲ್ಲ ಎಂದು ತಾಯಿಯರಿಗೆ ಶರಣು ಮಾಡಿ ಹೊರಟ. ಇಲ್ಲಿ ಯಲ್ಲಮ್ಮನ ಕಾವ್ಯದಲ್ಲಿ ಬರುವಂತಹ ಸಂದರ್ಭವು ಕೂಡ ಇಲ್ಲಿ ಗಮನಿಸಬಹುದು. ಅದೇನೆಂದರೆ ಯಲ್ಲಮ್ಮನ ಗಂಡ ಜಮದಗ್ನಿ ತಪಸ್ಸಿಗೆ ಹೋಗುವಾಗ ತನ್ನ ಮನೆಯ ಮುಂದೆ ಮಲ್ಲಿಗೆ ಗಿಡವನ್ನು ನೆಟ್ಟು ಹೋಗಿರುತ್ತಾನೆ. ಅದನ್ನು ಇದೇ ರೀತಿಯಾಗಿ ನೋಡಬಹುದು. ಚಂದ್ರಾಯುಧ ಹಿಡಿದುಕೊಂಡು ರೊಟ್ಟಿ ಬುತ್ತಿ ಕಟ್ಟಿಕೊಂಡು ಹೊರಡುತ್ತಾನೆ. ಹನ್ನೆರಡು ಯೋಜನ ಕಾಡಿನಲ್ಲಿ ಬಾಲವರ್ಧರಾಜ ಹೋಗುತ್ತಿರುತ್ತಾನೆ. ಹೋಗುವ ದಾರಿಯಲ್ಲಿ ಭೂಪತಿರಾಜನ ಪಟ್ಟಣ ಸಿಗುತ್ತದೆ. ಆ ರಾಜನಿಗೆ ಒಬ್ಬಳೆ ಹೆಣ್ಣು ಮಗಳಿರುತ್ತಾಳೆ. ಆ ರಾಜ್ಯದಲ್ಲಿ ಒಂದು ಹೆಬ್ಬುಲಿ ಸೇರಿಕೊಂಡು ಇರುತ್ತೆ. ಅದು ಸುತ್ತಲಿರುವ ಜನರನ್ನು ತಿನ್ನುತ್ತಿರುತ್ತದೆ ಮತ್ತು ಅದು ಬಹಳ ತೊಂದರೆ ಕೊಡುತ್ತಿರುತ್ತದೆ. ಆಗ ಆ ರಾಜ್ಯದ ರಾಜ ಯಾರು ಹುಲಿ ಕೊಲ್ಲುತ್ತಾರೊ ಅವರಿಗೆ ನನ್ನ ಮಗಳನ್ನು ಕೊಟ್ಟು ಮದುವೆ ಮಾಡಿಕೊಡುತ್ತೇನೆ ಮತ್ತು ನನ್ನ ರಾಜ್ಯವನ್ನು ಕೊಡುತ್ತೇನೆ ಎಂದು ಸಾರಿರುತ್ತಾನೆ. ಹುಲಿಯ ತುದಿಯ ಉಗುರು ಬಾಲವನ್ನು ತಂದವರಿಗೆ ಕೊಡುತ್ತೇನೆ ಎಂದಿರುತ್ತಾನೆ ಅಂಥ ದೇಶಕ್ಕೆ ಬಾಲವರ್ಧರಾಜ ಬರುತ್ತಾನೆ.

ಒಬ್ಬ ಬಡ ತಿಮ್ಮಮ್ಮನ ಮನೆಯಲ್ಲಿರುತ್ತಾನೆ. ಆಗ ತಿಮ್ಮಮ್ಮನಿಗೆ ಹೇಳುತ್ತಾನೆ. ಅಮ್ಮ ನಾನು ನಿನಗೆ ಬೇಡಿದಷ್ಟೇ ಹಣ ಕೊಡುತೀನಿ. ಒಂದು ರಾತ್ರಿ ಊಟ ಮತ್ತು ಮಲಗಲು ಜಾಗ ಕೊಡು ಎಂದನು. ಆಗ ತಿಮ್ಮಮ್ಮ ಒಪ್ಪಿಕೊಳ್ಳುತ್ತಾಳೆ. ಅಡುಗೆ ಮಾಡಿ ಊಟಕ್ಕೆ ನೀಡುತ್ತಾಳೆ, ಕುಡಿಯೋಕೆ ಉಪ್ಪು ನೀರು ಕೊಡುತ್ತಾಳೆ. ಆಗ ಬಾಲವರ್ಧರಾಜ ಯಾಕಮ್ಮ ಈ ಪಟ್ಟಣದಲ್ಲಿ ಸಿಹಿನೀರಿನ ಬಾವಿ ಇಲ್ಲವೆ ಎಂದು ಕೇಳಿದ. ಆಗ ತಿಮ್ಮಮ್ಮ ಕಂದ ಸಿಹಿನೀರಿನ ಬಾವಿ ಇದೆ. ಅಲ್ಲಿ ಹೆಬ್ಬುಲಿ ಸೇರಿದೆ. ಸೀಗೆಮೇಳೆಯಲ್ಲಿ ಕಂದ ಸಿಹಿ ನೀರಿಗೆ ಬಾವಿಗೆ ಹೋದವರನ್ನು ಒಬ್ಬರನ್ನು ಬಿಡುವುದಿಲ್ಲ ಎಂದು ಹೇಳಿದಳು. ಹುಲಿಯ ತುದಿ ಬಾಲ ತುದಿ, ಉಗುರು ಗುರುತಿಗೆ ತೆಗೆದುಕೊಂಡು ಬಂದ್ರೆ, ಅರ್ಧ ರಾಜ್ಯ ಬರುತ್ತೆ, ರಾಜನ ಮಗಳನ್ನು ಕೊಡುತ್ತಾರೆ. ಅಂತ ಹೇಳಿದಳು. ಕಂದ ಅಂತಹ ಹುಲಿಯನ್ನು

ಹೊಡೆಯೋರಿಲ್ಲವಲ್ಲಪ್ಪ ಎಂದು ಹೇಳಿ ಮಲಗಿಕೊಳ್ಳುತ್ತಾರೆ ಇಬ್ಬರು. ಆಗ ಅರ್ಧರಾತ್ರಿಯ ಸಮಯದಲ್ಲಿ ಬಾಲವರ್ಧರಾಜ ಎದ್ದು ಚಂದ್ರಾಯುಧ ಹಿಡಿದುಕೊಂಡು ಸಿಹಿನೀರಿನ ಬಾವಿ ಬಳಿ ಸೀಗೆ ಮೇಳೆ ಇದೆ. ಅಲ್ಲಿ ಹೆಬ್ಬುಲಿ ಮಲಗಿಕೊಂಡಿದೆ. ಅದನ್ನು ಬಾಲವರ್ಧರಾಜ ಹುಲಿಯನ್ನು ಕಾಲಿನಲ್ಲಿ ಒದೆಯುತ್ತಾನೆ. ಅದು ಏಳುತ್ತದೆ. ಎದ್ದು ಗುರುಗುಟ್ಟಿಕೊಂಡು ನೋಡುತ್ತದೆ. ಅದು ಗಾಬರಿಪಟ್ಟು ಓಡಿ ಹೋಗುತ್ತೆ. ಅಂದರೆ ಇಲ್ಲಿ ನರ ಮನುಷ್ಯನನ್ನು ಕಂಡು ಕ್ರೂರಪ್ರಾಣಿ ಹೆದರಿಕೊಂಡು ಹೋಗುವಂತೆ ಕಾವ್ಯದ ಭಾಗದಲ್ಲಿ ಕಾಣಬಹುದಾಗಿದೆ. ಬಾಲವರ್ಧರಾಜ ಚಂದ್ರಾಯುಧ ತೆಗೆದುಕೊಂಡು ಬೀಸಿ ಹುಲಿಗೆ ಹೊಡೆಯುತ್ತಾನೆ. ಆಗ ಹೆಬ್ಬುಲಿ ಕೋಟೆಯ ಬಾಗಿಲ ಬಳಿ ಬಂದು ತನ್ನ ಪ್ರಾಣವನ್ನು ಬಿಡುತ್ತದೆ. ಆಗ ಅದರ ತುದಿಯ ಬಾಲ ಕುಯ್ದುಕೊಂಡ, ತುದಿಯ ಉಗುರು ಕುಯ್ದುಕೊಂಡು ಕೆಂಪು ವಸ್ತ್ರದಲ್ಲಿ ಕಟ್ಟಿಕೊಂಡು ಕೋಟೆ ಮೇಲೆ ಹತ್ತಿ ಒಳಗಡೆಗೆ ಬರುತ್ತಾನೆ. ಮತ್ತೆ ತಿಮ್ಮಮ್ಮನ ಮನೆಗೆ ಹೋಗಿ ಮಲಗಿಕೊಂಡ. ಬೆಳಗಿನ ಜಾವದ ಸಮಯದಲ್ಲಿ ಮಡಿವಾಳ ತಿಮ್ಮಶೆಟ್ಟಿ ಕತ್ತೆ ಮೇಲೆ ಬಟ್ಟೆ ಹೇರಿಕೊಂಡು ಬಟ್ಟೆ ಒಗೆಯೋಕೆ ಹೋಗುತ್ತಾನೆ. ಕೋಟೆ ಹೆಬ್ಬಾಗಿಲಲ್ಲಿ ಸತ್ತ ಹೆಬ್ಬುಲಿಯನ್ನು ನೋಡುತ್ತಾನೆ. ಸತ್ತ ಹೆಬ್ಬುಲಿಯನ್ನು ನೋಡಿ ಬಿಟ್ಟು, ಹುಬ್ಬೆ ದೊಣ್ಣೆಯನ್ನು ತೆಗೆದುಕೊಂಡು ದಬದಬನೆ ಚೆಚ್ಚುತ್ತಾನೆ. ಹೆಬ್ಬುಲಿ ಸತ್ತಿರುವುದರಿಂದ ಆಗ ಹಿಂದಿರುಗಿ ಓಡಿಹೋಗಿ ಒಂದು ಮಚ್ಚನ್ನು ತೆಗೆದುಕೊಂಡು ನಾಲ್ಕು ಕಾಲು ಕತ್ತರಿಸಿಕೊಂಡ ಬಾಲವನ್ನು ಕತ್ತರಿಸಿಕೊಂಡು ಗಂಟುಕಟ್ಟಿಕೊಂಡು ರಾಜನ ಮಗಳನ್ನು ನಾನು ಮದುವೆ ಆಗಬೇಕು ಎಂದು ತಿಮ್ಮಶೆಟ್ಟಿ ಓಡಿಬಂದು ತನ್ನ ಹೆಂಡತಿಗೆ ಹೇಳುತ್ತಾನೆ. ನಾನು ಹೆಬ್ಬುಲಿ ಹೊಡೆದ ಧೀರ ಎಂದು ಹೇಳಿ ಅರಮನೆಗೆ ಹೋಗಿ ರಾಜನ ಬಳೀ ಹೋಗಿ ಮಹಾರಾಜನನ್ನು ಏಳಿಸುತ್ತಾನೆ. ಮಲಗಿರುವಂತ ಮಹಾರಾಜ ಎದ್ದು, ಯಾಕೋ ಮಡಿವಾಳ ಶೆಟ್ಟಿ ಇಷ್ಟೊತ್ತಿಗೆ ಯಾಕೆ ಬಂದಿಯಾ ಎಂದು ಕೇಳಿದ. ಆಗ ಮಡಿವಾಳ ತಿಮ್ಮಶೆಟ್ಟಿ ನನಗೆ ಮಡಿವಾಳ ಎನ್ನಬೇಡಿ ಮಾವ ಎನ್ನುತ್ತಾನೆ. ಆಗ ಮಹಾರಾಜನಿಗೆ ಗಾಬರಿಯಾಗುತ್ತದೆ. ತಿಮ್ಮಶೆಟ್ಟಿ ಹುಲಿಯ ನಾಲ್ಕು ಕಾಲನ್ನು ಬಾಲವನ್ನು ಕೊಡುತ್ತಾನೆ. ಆಗ ಮಹಾರಾಜ ಎಲ್ಲಿ ತುದಿ ಬಾಲ ತುದಿಯ ಉಗುರು ಇಲ್ಲವಲ್ಲ ಎಂದು ಕೇಳಿದ ಅದಕ್ಕೆ ತಿಮ್ಮಶೆಟ್ಟಿ ಅದನ್ನು ದುಬ್ಬೆ ದೊಣ್ಣೆ ತೆಗೆದುಕೊಂಡು ಹೊಡೆಯುವಾಗ ಪ್ರಾಣ ಬಿಡುವಾಗ ಹೆಬ್ಬುಲಿ ನೆಲವನ್ನೇ ಪರಚಿ ಪರಚಿ ಉಗುರೆಲ್ಲ ಸವೆದವು. ತುದಿಬಾಲ ಎಗರಿಕೊಂಡು ಹೋಯಿತು ಎಂದು ಹೇಳುತ್ತಾನೆ.

ಆಗ ಮಹಾರಾಜ ಇದ್ದೊಬ್ಬ ಮಗಳನ್ನು ಅಗಸನಿಗೆ ಕೊಡಬೇಕು. ಮಾತಿಗೆ ತಪ್ಪುವುದಿಲ್ಲ, ಮದುವೆ ಮಾಡಿಕೊಡುತ್ತೀನಿ ಎಂದು ಹೇಳಿದ. ಇಡೀ ರಾಜ್ಯಕ್ಕೆ ಸಾರಿಸಿದ

ಅರಮನೆಯನ್ನು ಶೃಂಗಾರ ಮಾಡಲು ಹೇಳಿದ. ಆಗ ಪಟ್ಟಣಕ್ಕೆಲ್ಲ ಸಾರುತ್ತಾರೆ. ಮಡಿವಾಳ ತಿಮ್ಮಶೆಟ್ಟಿ ಹುಲಿಯನ್ನು ಹೊಡೆದ ಎಂದು ಸಾರಿದರು. ಬಾಲವರ್ಧರಾಜ ಏಳುತ್ತಾನೆ. ಮುದುಕಿ ನೋಡಪ್ಪ ನಮ್ಮೂರ ಮಡಿವಾಳಶೆಟ್ಟಿ ಹುಲಿಯನ್ನು ಕೊಂದ. ಅವನು ರಾಜನ ಮಗಳನ್ನು ಮದುವೆಯಾಗುತ್ತಾನೆ ಎಂದು ಹೇಳಿದಳು. ಬಾಲವರ್ಧರಾಜ ಬಂದು ಕೆಂಪು ವಸ್ತ್ರದ ಗಂಟನ್ನು ಮಹಾರಾಜನ ಮುಂದೆ ಕೊಯ್ದು ಎಸೆಯುತ್ತಾನೆ. ಭೂಪತಿರಾಜ ಬಾಲವರ್ಧನನ ಮುಖವನ್ನು ನೋಡುತ್ತಾನೆ. ನೋಡಿ ರಾಜನ ಲಕ್ಷಣಗಳೆಲ್ಲ ಇವನಲ್ಲಿ ಕಾಣುತ್ತವೆ. ಆಗ ಭೂಪತಿರಾಜ ಮಡಿವಾಳ ತಿಮ್ಮಶೆಟ್ಟಿಯನ್ನು ಕರೆದುಕೊಂಡು ಬನ್ನಿ ಎಂದು ಹೇಳಿದ. ಆಗ ತಿಮ್ಮಶೆಟ್ಟಿ ಮಾವ ನನ್ನನ್ನು ಮಡಿವಾಳ ಶೆಟ್ಟಿ ಎನ್ನಬೇಡಿ ಎನ್ನುತ್ತಾನೆ. ಎಳೆದುಕೊಂಡು ಬನ್ನಿ ಆ ತಿಮ್ಮಶೆಟ್ಟಿಯನ್ನು ಎನ್ನುತ್ತಾನೆ. ಭೂಪತಿರಾಜ ಮಡಿವಾಳ ಶೆಟ್ಟಿ ಅವನ ಗಂಟುಬಿಚ್ಚಿ ನೋಡು ಎಂದ. ನಿಜವಾಗಿ ಹುಲಿಯನ್ನು ಕೊಂದಿರುವವರು ಯಾರು ಗೊತ್ತೆ ಎಂದ. ಆಗ ತಿಮ್ಮಶೆಟ್ಟಿಗೆ ಭಯವಾಗಿ ಕೈಕಾಲು ನಡುಗ ತೊಡಗಿದವು. ಆಗ ಭೂಪತಿರಾಜ ಮಡಿವಾಳ ಶೆಟ್ಟಿಯನ್ನು ಸಾಯಿಸಿ ಎನ್ನುತ್ತಾನೆ. ಆಗ ಬಾಲವರ್ಧರಾಜ ಅದನ್ನು ತಡೆಯುತ್ತಾನೆ. ಆಗ ತಿಮ್ಮಶೆಟ್ಟಿ ಹೆಂಡತಿಯನ್ನು ಕರೆದುಕೊಂಡು ಊರು ಬಿಟ್ಟು ಹೋಗುತ್ತಾನೆ. ಬಾಲವರ್ಧರಾಜನಿಗೆ ತನ್ನ ಮಗಳು ಮಾಣಿಕಮ್ಮನನ್ನು ಕೊಟ್ಟು ವಿವಾಹ ಮಾಡುತ್ತಾನೆ. ಆಗ ಬಾಲವರ್ಧರಾಜ ತನ್ನ ಸಂಗತಿಯನ್ನು ಮಡದಿಗೆ ತಿಳಿಸುತ್ತಾನೆ. ಅಲ್ಲಿಗೆ ಹನ್ನೊಂದು ವರ್ಷ ಆರು ತಿಂಗಳ ಕಾಲವಾಯ್ತು. ಹೆಂಡತಿಯ ಮನೆಯ ಮುಂದೆ ಒಂದು ಮಲ್ಲಿಗೆ ಗಿಡ ಗುರುತಿಗೆ ಇಟ್ಟು ತಾಯಂದಿರಿಗೆ ಹೇಳಿದ ಧೈರ್ಯವನ್ನೇ ತನ್ನ ಮಡದಿಗೆ ಹೇಳಿ ಪುನ್ನಾಟಗುಡ್ಡಕ್ಕೆ ಹೊರಟ.

ಪುನ್ನಾಟ ಗುಡ್ಡದ ಬಳಿ ಸೋಮನಹಳ್ಳಿ ಎಂಬ ಊರು. ಆ ಊರು ಹತ್ತಿರ ಒಂದು ಸೇದೋ ಬಾವಿ ಇರುತ್ತೆ, ಅದರ ಬಳಿ ಬಂದು ಬಾಲವರ್ಧರಾಜ ಕುಳಿತುಕೊಳ್ಳುತ್ತಾನೆ. ಆಗ ಆ ಬಾವಿಗೆ ನೀರು ತರಲು ಬಂದ ನಾರಿಯರು ತಮ್ಮ ತಾಯಿ ಬಾಲನಾಗಮ್ಮನ ಸುದ್ದಿಯನ್ನು ಮಾತನಾಡುತ್ತಾರೆ. ಬಾಲನಾಗಮ್ಮನನ್ನು ಮಂತ್ರವಾದಿ ಕರೆದುಕೊಂಡು ಬಂದಿದ್ದಾನೆ. ಅಲ್ಲಿ ಹೂವನ್ನು ಕೊಡುವಂತಹ ಸುಬ್ಬಮ್ಮ ಹೋಗುತ್ತಾಳೆ. ಅವಳಿಗೆ ಎಲ್ಲ ಸುದ್ದಿ ಗೊತ್ತು ಎನ್ನುತ್ತಾರೆ. ಬಾಲವರ್ಧರಾಜ ಸುಬ್ಬಮ್ಮನ ಮನೆಗೆ ಬಂದು ಅಮ್ಮ ನನಗೆ ತಾಯಿ–ತಂದೆ ಇಲ್ಲ. ನೀವು ಕಾಲಲ್ಲಿ ತೋರಿದ ಕೆಲಸವನ್ನು ನಾನು ತಲೆಯ ಮೇಲೆ ಹೊತ್ತುಕೊಂಡು ಮಾಡುತ್ತೀನಿ ಎಂದ ಬಾಲವರ್ಧರಾಜ. ಆಗ ಸುಬ್ಬಮ್ಮ ಬಾಲವರ್ಧರಾಜನನ್ನು ಕೆಲಸಕ್ಕೆ ಇರಿಸಿಕೊಳ್ಳುತ್ತಾಳೆ. ಒಂದು ತಿಂಗಳು, ಎರಡು ತಿಂಗಳು, ಮೂರು ತಿಂಗಳು,

ನಾಲ್ಕು ತಿಂಗಳಾಯಿತು. ಸುಬ್ಬಮ್ಮನಿಗೆ ಜ್ವರ ಬಂದು ಮಲಗಿಕೊಳ್ಳುತ್ತಾಳೆ. ಆ ದಿನ ಬಾಲವರ್ಧರಾಜ ಹೂವನ್ನು ಕಟ್ಟಿ ಓಲೆಗರಿ ತೆಗೆದುಕೊಂಡು ತಾಯಿಗೆ ಪತ್ರವನ್ನು ಬರೆಯುತ್ತಾನೆ. ಅಮ್ಮ ಮಂತ್ರವಾದಿಯ ಪ್ರಾಣ ಎಲ್ಲಿದೆ ತಿಳಿಸೆಂದು ಹೇಳುತ್ತಾನೆ. ಅದನ್ನು ಹೂವಿನ ಬುಟ್ಟಿಯಲ್ಲಿ ಹೂವಿನ ಜೊತೆಗೆ ಕಳಿಸುತ್ತಾನೆ. ಸುಬ್ಬಮ್ಮ ಅದನ್ನು ತೆಗೆದುಕೊಂಡು ಹೋಗಿ ಬಾಲನಾಗಮ್ಮನಿಗೆ ಕೊಡುತ್ತಾಳೆ. ಆಗ ಬಾಲನಾಗಮ್ಮ ಹೂವನ್ನು ನೋಡಿ ಅಮ್ಮ ಯಾರಮ್ಮ ಇವತ್ತು ಹೂವನ್ನು ಕಟ್ಟಿರೋದು ಎಂದು ಕೇಳುತ್ತಾಳೆ. ನನ್ನ ಮನೆಯಲ್ಲಿ ಒಬ್ಬ ಮಗನಿದ್ದಾನೆ. ನನಗೆ ಜ್ವರ ಬಂದಿದ್ದಕ್ಕೆ ಅವನೇ ಇವತ್ತು ಹೂವನ್ನು ಕಟ್ಟಿದ್ದಾನೆ ಎಂದು ಹೇಳುತ್ತಾಳೆ. ಆಗ ಬಾಲನಾಗಮ್ಮನ ಕಣ್ಣಿಗೆ ಓಲೆಗರಿ ಕಾಣುತ್ತದೆ. ಅದನ್ನು ನೋಡಿದ ಬಾಲನಾಗಮ್ಮ ನಿಮ್ಮ ತಂದೆಯರು ಕರಿಕಲ್ಲ ಬೆಟ್ಟವಾಗಿ ಹೋಗಿದ್ದಾರೆ. ಕಂದ ನೀನು ಹಿಂದಿರುಗಿ ಹೊರಟು ಹೋಗು ಎಂದು ಹೇಳಿ ಮತ್ತೆ ಬರೆಯುತ್ತಾಳೆ. ಅದನ್ನು ಹೂವಿನ ಬುಟ್ಟಿಯೊಳಗೆ ಹಾಕುತ್ತಾಳೆ. ಸುಬ್ಬಮ್ಮ ಹೂವನ್ನು ಕೊಟ್ಟು ಮತ್ತೆ ಮನೆಗೆ ಬರುತ್ತಾಳೆ. ಬಂಧು ಹೂ ಬುಟ್ಟಿಯನ್ನು ನಡು ಮನೆಯಲ್ಲಿ ಇಡುತ್ತಾಳೆ. ಬಾಲವರ್ಧರಾಜ ಬುಟ್ಟಿಯಲ್ಲಿ ಇರುವ ಓಲೆಗರಿ ತೆಗೆದುಕೊಂಡು ನೋಡಿ ದುಃಖ ಪಡುತ್ತಾನೆ. ಮತ್ತೆ ಮರುದಿವಸ ಚೆನ್ನಾಗಿ ಹೂ ಕಟ್ಟಿ ಉತ್ತರ ಬರಲಿಲ್ಲ ನನ್ನ ತಾಯಿ ಎಂದು ಮತ್ತೆ ಕಳಿಸಿದ.

ಒಂದು ದಿವಸ ಮಂತ್ರವಾದಿ ಬಂದು ಮಂಚದ ಮೇಲೆ ಕೂಡುತ್ತಾನೆ. ಆಗ ಬಾಲನಾಗಮ್ಮ ಹೇಳುತ್ತಾಳೆ. ಇನ್ನು ಹದಿನೈದು ದಿನ ಕಳೆದರೆ ಹನ್ನೆರಡು ವರ್ಷವಾಗುತ್ತೆ. ಸ್ವಾಮಿ ನನಗೆ ಇನ್ಯಾವ ಆಸೆಯಿಲ್ಲ. ನಾನೆ ಹೆಂಡತಿ, ನೀನೇ ಗಂಡ ಸುಖವಾಗಿ ಬಾಳಬೇಕು. ಮನ ಮೆಚ್ಚುವಂತಹ ಮಾತನ್ನು ಹೇಳುತ್ತಾಳೆ ಬಾಲನಾಗಮ್ಮ. ಆಗ ಮಂತ್ರವಾದಿ ಮಾಯದ ಫಕೀರ ಕೇಳಿ ಬಾಲನಾಗಮ್ಮನನ್ನು ಜೈಸೋರು ಯಾರು ಇಲ್ಲ. ನನ್ನ ಪ್ರಾಣವನ್ನು ಜೈಸೋರು ದೇಶದೊಳಗೆ ಯಾರಿಲ್ಲ ಎನ್ನುತ್ತಾನೆ. ಅಂದರೆ ಮಾತು ಬಂದಾಗ ಕತ್ತೆ ಕಾಲಿಡಿಯಬೇಕು. ಮಾತಿಗೆ ಹೆಂಡತಿಯಾಗುವುದಿಲ್ಲ, ಇಲ್ಲಿಂದ ಹೋಗಬೇಕೆಂದ್ರೆ ಸುಳ್ಳು ಹೇಳಬೇಕು ಎಂದು ಕೊಳ್ಳುತ್ತಾಳೆ. ಮಾಯದ ಫಕೀರ ನನ್ನ ಪ್ರಾಣ ಹೋಗಬೇಕಾದರೆ ಏಳು ಸಮುದ್ರ, ಏಳು ಬೆಟ್ಟ ದಾಟಿ ಹೋಗಬೇಕು, ಅಲ್ಲಿಂದ ಹೋದರೆ ಬಂಡಿಕಾಳಮ್ಮ ದೇವರು ಅಲ್ಲಿದೆ. ಬಂಡಿಕಾಳಮ್ಮನ ಹಣೆಯಲ್ಲಿ ವಜ್ರದ ಹರಳಿದೆ ಆ ವಜ್ರದ ಹರಳನ್ನು ಕಿತ್ತು ಹಾಕಿದರೆ ಬಾಗಿಲು ತೆರೆಯುತ್ತದೆ. ಆಗ ಉಕ್ಕಿನ ಪಂಜರ ಸಿಗುತ್ತೆ. ಅದರಲ್ಲಿ ಒಂದು ಗಿಳಿ ಇದೆ. ಆ ಗಿಳಿಯನ್ನು ಹಿಡಿದುಕೊಂಡರೆ ನನಗೆ ಜ್ವರ ಬರುತ್ತೆ. ಗಿಳಿರೆಕ್ಕೆ ಮುರಿದರೆ ನನ್ನ ಕೈ ಮುರಿಯುತ್ತದೆ. ಗಿಳಿಯ ಕುತ್ಗೆ ಕತ್ತರಿಸಿದರೆ ನನ್ನ ಪ್ರಾಣ ಹೋಗುತ್ತೆ ಎಂದು ತನ್ನ ಪ್ರಾಣದ

ಸಂಗತಿಯನ್ನು ತಿಳಿಸುತ್ತಾನೆ. ಮಾಯದ ಫಕೀರ ಹೇಳಿ ಅರಮನೆಗೆ ಹೋದ. ಆಗ ಮಗನಿಗೆ ಓಲೆ ಬರೆದು ಎಲ್ಲ ವಿಷಯವನ್ನು ತಿಳಿಸುತ್ತಾಳೆ ಬಾಲನಾಗಮ್ಮ. ಓಲೆಗರಿ ನೋಡಿದ ಬಾಲವರ್ಧರಾಜ ಹೊರಡುತ್ತಾನೆ. ಏಳು ಸಮುದ್ರದ ದಡದಲ್ಲಿ ಒಂದು ದೊಡ್ಡದಾದ ಆಲದ ಮರವಿರುತ್ತೆ, ಆ ಮರದಲ್ಲಿ ಗಂಡು ಬೇರುಂಡ ಪಕ್ಷಿ, ಹೆಣ್ಣು ಬೇರುಂಡ ಪಕ್ಷಿ ಮರಿ ಮಾಡಿ ಮರಿಗೆ ಕಾಳನ್ನು ತರಲು ಹೋಗಿರುತ್ತವೆ. ಅಲ್ಲಿಗೆ ನಡೆದು ನಡೆದು ಸಾಕಾಗಿ ಬಾಲವರ್ಧರಾಜ ಚಂದ್ರಾಯುಧ ತಲೆಕೆಳಗೆ ಇಟ್ಟುಕೊಂಡು ಮಲಗಿರುತ್ತಾನೆ. ಆಗ ಕಾಳಿಂಗ ಸರ್ಪವೊಂದು ಮರಿಯನ್ನು ತಿನ್ನಬೇಕು ಎಂದು ಮರವನ್ನು ಹತ್ತಿ ಗೂಡಿನ ಬಳಿಗೆ ಬರುತ್ತೆ ಸರ್ಪ ಬರುವುದನ್ನು ನೋಡಿ ಭೇರುಂಡ ಪಕ್ಷಿಯ ಮರಿಗಳು ಚಿಲಿಚಿಲಿ ಎನ್ನುತ್ತಿರುತ್ತವೆ. ಇದು ಕೆಳಗೆ ಮಲಗಿರುವ ಬಾಲವರ್ಧರಾಜನಿಗೆ ಕೇಳಿಸುತ್ತದೆ. ಆಗ ಅದನ್ನು ನೋಡಿ ಚಂದ್ರಾಯುಧ ತೆಗೆದುಕೊಂಡು ಸರ್ಪವನ್ನು ಕತ್ತರಿಸುತ್ತಾನೆ. ಮತ್ತೆ ಮರದ ಕೆಳಗೆ ಮಲಗಿಕೊಂಡು ನಿದ್ರೆ ಮಾಡುತ್ತಾನೆ. ಆಗ ಸರ್ಪ ಮೇಲಿಂದ ಕೆಳಕ್ಕೆ ಇವನಿರುವಲ್ಲಿಗೆ ಬಂದು ಬಾಲವರ್ಧರಾಜನ ಕೆನ್ನೆಯನ್ನು ಕಚ್ಚುತ್ತೆ. ಅಮ್ಮ ಎಂದು ಕಿರುಚಿಕೊಂಡು ಅಲ್ಲೇ ಪ್ರಾಣವನ್ನು ಬಿಟ್ಟ. ಆಗ ತಾಯಿಯರ ಮನೆಯ ಮುಂದೆ, ಹೆಂಡತಿಯ ಮನೆಯ ಮುಂದೆ ನೆಟ್ಟಿರುವಂತಹ ಮಲ್ಲಿಗೆ ಹೂವಿನ ಗಿಡ ಬಾಡಿ ಹೋಗುತ್ತೆ. ಆಗ ತಾಯಿಯರು, ಹೆಂಡತಿ ದುಃಖ ಪಡುತ್ತಾರೆ.

ಗಂಡುಭೇರುಂಡ ಪಕ್ಷಿಯು ಹೆಣ್ಣು ಭೇರುಂಡ ಪಕ್ಷಿಯು ಕಾಳನ್ನು ತೆಗೆದುಕೊಂಡು ಬಂದು ಮರಿಗಳಿಗೆ ಕೊಡುತ್ತವೆ. ಆಗ ಮರಿಗಳು ಕಾಳನ್ನು ತಿನ್ನದೇ ಮರಿಗಳು ಹೇಳುತ್ತವೆ. ನಡೆದ ಸಂಗತಿ ತಿಳಿಸುತ್ತವೆ. ಹಾವು ಕಡಿದು ಮಲಗಿರುವ ರಾಜಕುಮಾರನನ್ನು ನೋಡಿ ದೇವಲೋಕಕ್ಕೆ ಹೋಗಿ ಸಂಜೀವಿನಿಯನ್ನು ತೆಗೆದುಕೊಂಡು ಬಂದು ಬಾಲವರ್ಧರಾಜನ ಎದೆ ಮೇಲೆ ಸಂಜೀವಿನಿಯನ್ನು ಇಡುತ್ತವೆ. ಆಗ ಪ್ರಾಣ ಬಂದು ಎದ್ದೇಳುತ್ತಾನೆ. ಆಗ ತಾಯಿ, ಹೆಂಡತಿಯ ಮನೆಯ ಮುಂದಿರುವ ಮಲ್ಲಿಗೆ ಗಿಡವು ಚಿಗುರುತ್ತದೆ. ಆಗ ಬಾಲವರ್ಧರಾಜನಿಗೆ ನಿನ್ನ ಕಷ್ಟ ಏನೆಂದು ಹೇಳು ಎಂದು ಭೇರುಂಡ ಪಕ್ಷಿಗಳು ಕೇಳಿದವು. ಅದಕ್ಕೆ ಎಲ್ಲ ವಿಷಯವನ್ನು ತಿಳಿಸಿದನು. ಆಗ ಗಂಡುಭೇರುಂಡ ಪಕ್ಷಿ ಮತ್ತು ಹೆಣ್ಣುಭೇರುಂಡ ಪಕ್ಷಿ ರೆಕ್ಕೆಯ ಮೇಲೆ ಕೂರಿಸಿಕೊಂಡು ಏಳು ಸಮುದ್ರ, ಏಳು ಗುಡ್ಡ ದಾಟಿ ಬಂಡಿಕಾಳಮ್ಮನ ದೇವಸ್ಥಾನದ ಬಳಿಗೆ ಬಂದವು. ಬಾಲವರ್ಧರಾಜ ಬರುತ್ತಾನೆ. ಈ ಸಂಗತಿ ಮಂತ್ರವಾದಿಗೆ ತಿಳಿದು ಏನೋ ಮೋಸವಾಗಿದೆ ಎಂದು ತಿಳಿದು ಮಂತ್ರದ ದೊಣ್ಣೆ ಕೈಯಲ್ಲಿ ಹಿಡಿದುಕೊಂಡು ದೃಷ್ಟಿಯಿಂದ ನೋಡಿದ. ನೋಡಿ ಮಾಯದ ಹಾವನ್ನು ಮಾಡಿ ಕಳುಹಿಸುತ್ತಾನೆ. ಗಂಡು ಭೇರುಂಡ, ಹೆಣ್ಣುಭೇರುಂಡ ಪಕ್ಷಿಗಳು ಹಾವನ್ನು ಕಡಿದು ಹಾಕಿದವು. ಬಂಡಿ ಕಾಳಮ್ಮನ ದೇವಸ್ಥಾನದ ಹತ್ತಿರ ಬಂದು ವಜ್ರದ ಹವಳವನ್ನು ಕೀಳುತ್ತಾನೆ. ಆಗ ಬಾಗಿಲು ತೆರೆಯುತ್ತದೆ.

ಉಕ್ಕಿನ ಪಂಜರ ತೆಗೆದ, ಮಾಯದ ಫಕೀರನಿಗೆ ಜ್ವರ ಬರುತ್ತೆ, ಆಗ ಬಲುಕೋಪದಿಂದ ಮಾಯದ ಫಕೀರ ಹನ್ನೆರಡು ವರ್ಷ ಊಟ, ಬಟ್ಟೆ ಕೊಟ್ಟು ಸಾಕಿದೆ, ಬಾಲನಾಗಮ್ಮನನ್ನು ನನ್ನ ಆಸೆಯನ್ನಾದರೂ ತೀರಿಸಿಕೊಳ್ಳಬೇಕು ಎಂದು ನಾಗಮ್ಮನ ಬಳಿಗೆ ಹೊರಟ. ಬಾಲವರ್ಧರಾಜ ಗಿಳಿಯನ್ನು ಹಿಡಿದುಕೊಂಡು ರೆಕ್ಕೆ ಮುರಿದ. ಆಗ ಮಾಯದ ಫಕೀರನ ಕೈ ಕಾಲು ಮುರಿದು ಕೆಳಕ್ಕೆ ಬಿದ್ದ. ಇಲ್ಲಿ ಪುರುಷನ ಕಾಮುಕ ದೃಷ್ಟಿಯನ್ನು ಕಾಣಬಹುದು. ಹೆಣ್ಣು ಪರ ಪುರುಷನ ಮಡದಿಯಾದರೂ ಅವಳನ್ನು ಆಸೆ ಪಡುವುದು ಪುರುಷ ವ್ಯವಸ್ಥೆಯಲ್ಲಿ ಕಾಣುವಂತಹದ್ದು. ಆಗ ಬಾಲವರ್ಧರಾಜ ಗಿಳಿಯನ್ನು ತೆಗೆದುಕೊಂಡು ಮಾಯದ ಫಕೀರನ ಬಳಿಗೆ ಬರುತ್ತಾನೆ. ಬಂದು ನನ್ನ ತಂದೆ ಹಾಗೂ ದೊಡ್ಡಪ್ಪಂದಿರನ್ನು ಉಳಿಸಿದರೆ ನಿನ್ನ ಜೀವ ಉಳಿಸುತ್ತೇನೆ ಎಂದು ಹೇಳಿದ. ಅದಕ್ಕೆ ಮಾಯದ ಫಕೀರ ಅವರನ್ನು ಎಬ್ಬಿಸಿದ. ಅಷ್ಟು ದಿನ ಕಲ್ಲಾಗಿದ್ದ ರಾಜರೆಲ್ಲ ಎದ್ದರು. ದಂಡುದಾಳಿ ಎದ್ದಿತು. ಆಗ ಗಿಳಿಯನ್ನು ಎರಡು ತುಂಡಾಗಿ ಕತ್ತರಿಸಿ ಮಾಯದ ಫಕೀರನನ್ನು ಕೊಂದು ತನ್ನ ರಾಜ್ಯಕ್ಕೆ ತನ್ನ ತಾಯಿ–ತಂದೆ, ದೊಡ್ಡಪ್ಪಂದಿರು ಮತ್ತು ದಂಡು ದಾಳಿಯನ್ನು ಕರೆದುಕೊಂಡು ಪುನ್ನಾಡು ಗುಡ್ಡವನ್ನು, ಜೀರರ ಸುಬ್ಬಮ್ಮನಿಗೆ ಕೊಟ್ಟು ದಂಡುದಾಳಿ ಜೊತೆ ತನ್ನ ಮಡದಿ ಮಾಣಿಕ್ಯದೇವಿಯನ್ನು ಕರೆದುಕೊಂಡು ತನ್ನ ಪಟ್ಟಣವನ್ನು ಸೇರಿದನು. ಆಗ ಎಲ್ಲರೂ ಸೇರಿ ಬಾಲವರ್ಧನಿಗೆ ಮದುವೆ ಮಾಡಿದರು.

**೪.೬. ಬಾಲನಾಗಮ್ಮ ಪಾವಿತ್ರತ್ತೆಯ ಪರೀಕ್ಷೆಗೆ ಗುರಿಯಾಗುವ ಸಂದರ್ಭ**

ಗಂಧದ ಸೌದೆ ತರಿಸಿದ ಅರಮನೆ ಮುಂದೆ ಹಾಕಿಸಿದ
ಬಾಲನಾಗಮ್ಮ ಶಿವಶರಣೆ ಆವಾಗೇನ ಮಾಡಿದಳು
ಮಲ್ಲಿಗೆ ಮೊಗ್ಗಿನ ಹಾರವ ಕೊರಳಿಗಾದರು ಹಾಕಿದಳು
ಸುತ್ತ ಸೇರಿದ ಪ್ರಜೆಗಳಿಗೆ ಶರಣನಾದರೆ ಮಾಡಿದಳು
ಅಗ್ನಿಗಾದರೆ ಧುಮುಕಿದಳು ಪಾರ್ವತಿ ಪರಮೇಶ್ವರನು
ಅಯ್ಯ ಪಾರ್ವತಿ ಪರಮೇಶರು ಪ್ರತ್ಯಕ್ಷವಾದರು
ಉರಿಯೊ ಬೆಂಕಿಯು ಆಗ ತಣ್ಣಗೆ ಆಯಿತಲ್ಲ
ಮುಡಿದ ಮಲ್ಲಿಗೆ ಮೊಗ್ಗು ಅರಳಿನಿಂತವು ಆಗ
ಪಾರ್ವತಿ ಪರಮೇಶ್ವರರು ಸೇರಿ ಬಾಲನಾಗಮ್ಮನಿಗೆ
ಕಾರುವರ್ಧನ ರಾಜನಿಗೆ ಶಿವಶರಣೆ ಬಾಲನಾಗಿಗೆ

ಮತ್ತೆ ಮದುವೆಯ ಮಾಡಿದರಲ್ಲಿ ಆಗ ಎಲ್ಲ ಸೇರಿಕೊಂಡು
ಎಲ್ಲರು ಸುಖವಾಗಿ ಇರುತಾರೆ ಪಟ್ಟಣದಲಿ
ಎಂತೆಂಬೊ ಬಾಲನಾಗಮ್ಮನ ಕತೆಯಾದರೆ ಇಲ್ಲಿಗೆ
ಅಂಕಿತವು ಶಿವಶಿವ ತಂದನ್ನ ತಾನ

ಜನಪದ ರಾಮಾಯಣದಲ್ಲಿ ಸೀತೆಯ ಪಾವಿತ್ರತೆಯನ್ನು ರಾಮನು ಪರೀಕ್ಷಿಸಿದಂತೆ, ಅಂದರೆ ಅಲ್ಲಿ ಲಕ್ಷ್ಮಣ ಸೀತೆಯನ್ನು ಕರೆದುಕೊಂಡು ಕಾಡಿಗೆ ಹೋಗುತ್ತಾನೆ. ಹದಿನಾರು ಯೋಜನ ದಾರಿಯನ್ನು ನಡೆದರೂ ಅವರ ಪಯಣ ಮುಗಿಯಲಿಲ್ಲ! ಕೊನೆಗೆ ಸೀತಾದೇವಿ ಲಕ್ಷ್ಮಣನನ್ನು ಪ್ರಶ್ನಿಸುತ್ತಾಳೆ, "ನೀ ಏನು ಕಾರ್ಯಕ್ಕೆ ಕರ ತಂದೆ?" ಎಂದಳು. ಲಕ್ಷ್ಮಣ ನೀಡುವ ಉತ್ತರ ನಿಷ್ಕಪಟವಾದುದು, ಪ್ರಾಮಾಣಿಕವಾದುದು.

'ಅಲ್ಲದವರ ಮಾತಕೇಳಿ ನಿಲ್ಲದ ಕೋಪವತಾಳಿ
ಕೊಲ್ಲಕಪ್ಪಣೆ ಕೊಟ್ಟು ಕಳಿವವರೆ'

ಎಂದನು ಲಕ್ಷ್ಮಣ. ಇಂತಹ ಪ್ರಸಂಗ ಬಾಲನಾಗಮ್ಮ ಕಾವ್ಯದಲ್ಲಿ ಬರುತ್ತದೆ. ಅಂದರೆ ಭಾರತೀಯ ಪರಂಪರೆಯಲ್ಲಿ ಪಾತಿವ್ರತ್ಯಕ್ಕೆ ಬಹಳ ಮಹತ್ವವಿದೆ. ಸತಿ ಸಾವಿತ್ರಿ, ಸತಿ ಅನಸೂಯ, ಜನಪದ ಕಥನ ಗೀತೆಗಳು, ಖಂಡಕಾವ್ಯಗಳು, ಮಹಾಕಾವ್ಯಗಳು, ಮೂಲತಃ ಪಾತಿವ್ರತ್ಯಯನ್ನು ಕುರಿತಂಥ ಕೃತಿಗಳಾಗಿವೆ. ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಪಾತಿವ್ರತ್ಯದ ವಿಷಯದಲ್ಲಿ ಸ್ವಲ್ಪಮಟ್ಟಿಗೆ ಗೌರವವೂ ಇದೆ. ಹೆಣ್ಣು ತನ್ನ ಶೀಲವನ್ನು ಕಾಪಾಡಿಕೊಂಡು ಪಾತಿವ್ರತ್ಯ ಎನಿಸಿಕೊಂಡರೆ ಸಾಕು. ಅದು ಅವಳಿಗೆ ಸರ್ವಾಭರಣವಾಗಿರುತ್ತದೆ. ಅವಳು ಪತಿವ್ರತೆ ಎನಿಸಿಕೊಳ್ಳುವಲ್ಲಿ ಎರಡು ತೊಡರುಗಳಿದ್ದು, ಕಠಿಣವಾದ ಪರೀಕ್ಷೆಗಳಲ್ಲಿ ಗೆದ್ದರೆ ಮಾತ್ರ ಅವಳನ್ನು ಪತಿವ್ರತೆ ಎಂಬುದಾಗಿ ಸಮಾಜ ಒಪ್ಪಿಕೊಳ್ಳುತ್ತದೆ. ಪತಿವ್ರತ್ಯವನ್ನು ನಿರೂಪಿಸುತ್ತಾರೆ. ದೈವ ಮಹಿಮೆ ಇದೆ ಎಂದರೆ ತಪ್ಪಾಗಲಾರದು. ಅಂತಹ ಒಂದು ಪರೀಕ್ಷೆ ಈ ಬಾಲನಾಗಮ್ಮನಿಗೆ ಆಗುತ್ತದೆ. ಅಂದರೆ ಇಲ್ಲಿ ಬಾಲನಾಗಮ್ಮನ ಪತಿ ಕಾರುವರ್ಧರಾಜನು ಹೇಳುತ್ತಾನೆ. ಹನ್ನೆರಡು ವರ್ಷ ಮಾಯದ ಫಕೀರನ ಸೆರೆಯಲ್ಲಿರುವ ಬಾಲನಾಗಮ್ಮನನ್ನು ಅವನು ಏನು ಮಾಡದೇ ಬಿಟ್ಟಿರುವನಾ ಎಂದು ಕೇಳಿದ. ಅದಕ್ಕೆ ಬಾಲನಾಗಮ್ಮ 'ಅಗ್ನಿಕೊಂಡದಲ್ಲಿ' ಬಿದ್ದು ಏಳು ದಿವಸ ಆ ಕೊಂಡದಲ್ಲಿದ್ದು ಅಗ್ನಿ ದಿವ್ಯೆಯಾಗಿ ಬಾಲನಾಗಮ್ಮ ತನ್ನ ಪಾತಿವ್ರತೆ ಮಾಡುತ್ತಾಳೆ. ಆಗ ಉರಿಯುವ ಬೆಂಕಿ ತಣ್ಣಗಾಯಿತು. ಪಾರ್ವತಿ ಪರಮೇಶ್ವರ ಪ್ರತ್ಯಕ್ಷವಾದರು. ಬಾಲನಾಗಮ್ಮ ಮುಡಿದ ಹೂ ಬಾಡಲಿಲ್ಲ, ಅರಳಿ ನಿಂತಿತು.

ಇದನ್ನು ಕಂಡು ಶಿವಶರಣೆ ಬಾಲನಾಗಮ್ಮನ ಗಂಡ ಕಾರುವರ್ಧರಾಜ ಒಪ್ಪಿಕೊಂಡ. ಮತ್ತೆ ಮದುವೆ ಮಾಡಿದರು. ಪಾರ್ವತಿ ಪರಮೇಶ್ವರರು ಆಗ ಎಲ್ಲರೂ ಸುಖವಾಗಿ ಇರುತ್ತಾರೆ.

ಮೌಖಿಕ ಮಹಾಕಾವ್ಯಗಳಲ್ಲಿ ಚಿತ್ರಿಸಲ್ಪಡುವ ಹೆಣ್ಣು ಅನೇಕ ಬಗೆಯ ಸ್ವವಿರೋಧಗಳಿಂದ ಹಾಗೂ ದ್ವಂದ್ವಗಳಿಂದ ಕೂಡಿದ್ದಾಳೆ. ಭಾರತೀಯ ಶಿಷ್ಟ ಸಾಹಿತ್ಯ ಸಂದರ್ಭಗಳಲ್ಲಿ ಸ್ತ್ರೀ ಪುರುಷ ಸಂಬಂಧವನ್ನು ಕುರಿತ ತಿಳುವಳಿಕೆ ಸಂಪೂರ್ಣವಾಗಿ ಪುರುಷ ಕೇಂದ್ರಿತವಾಗಿದ್ದು, ಆ ಸಾಹಿತ್ಯವು ಹೆಣ್ಣಿನ ತ್ಯಾಗ, ಸಂಯಮ, ಆತ್ಮ ಸಮರ್ಪಣೆ ಇವುಗಳನ್ನೇ ವೈಭವೀಕರಿಸಿ, ಆ ಮೂಲಕ ಹೆಣ್ಣಿನ ಸುತ್ತ 'ಪಾತಿವ್ರತ್ಯ' ಎಂಬ ಪರಿಕಲ್ಪನೆಯ ಜಾಲವನ್ನೇ ನೇಯುತ್ತದೆ. ಇಂತಹ ಪಾತಿವ್ರತ್ಯವೆಂಬ ಪರಿಕಲ್ಪನೆಯ ಮೂಲ ಮಾದರಿಗಳಿಗೆ ಸೀತೆ, ಸಾವಿತ್ರಿ, ಮಂಡೋದರಿ, ದ್ರೌಪದಿ, ಶಕುಂತಲೆ ಮುಂತಾದವರು ನಿಲ್ಲುತ್ತಾರೆ ಎಂದೆನ್ನಬಹುದು. ಅದರಂತೆ ಈ ಕಾವ್ಯದಲ್ಲಿ ಬಾಲನಾಗಮ್ಮನನ್ನು ಕಾಣಬಹುದಾಗಿದೆ.

ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಬಾಲನಾಗಮ್ಮ ಕಥನ ಕಾವ್ಯವನ್ನು ಹೇಗೆ ಮಹಿಳಾ ಆಶಯಗಳನ್ನು ಪ್ರತಿನಿಧಿಸುತ್ತದೆ? ಆ ಆಶಯಗಳು ಮಹಿಳಾ ಪರವಾದ ಅಂಶಗಳನ್ನು ಪ್ರತಿನಿಧೀಕರಿಸುತ್ತವೆಯೇ? ಅಥವಾ ಪುರುಷ ಪ್ರಧಾನ ಮೌಲ್ಯಗಳನ್ನೇ ಒಪ್ಪಿಕೊಂಡಿವೆಯೇ? ಎಂಬುದನ್ನು ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ.

**ಅಡಿಟಿಪ್ಪಣಿಗಳು**

೧. ಪರಮಶಿವಯ್ಯ ಜೀ.ಶಂ., **ಜಾನಪದ ಖಂಡಕಾವ್ಯಗಳು,** ಪು.೧೪೪-೧೪೭

೨. ಅದೇ, ಪು.೧೪೭

೩. ಅದೇ, ಪು.೧೫೪-೧೫೮

೪. ಅದೇ, ಪು.೧೬೦-೧೬೨

೫. ಅದೇ, ಪು.೧೬೩-೧೬೬

೬. ಅದೇ, ಪು.೧೭೮

೭. ಪರಮಶಿವಯ್ಯ ಜೀ.ಶಂ., ೧೯೭೯, ದಕ್ಷಿಣ ಕರ್ನಾಟಕದ ಜನಪದ ಕಾವ್ಯ ಪ್ರಕಾರಗಳು, ಪು.೩೮೪

## ಅಧ್ಯಾಯ: ಐದು

# ಉಪಸಂಹಾರ

ಒಟ್ಟಾರೆಯಾಗಿ ಈ ಬಾಲನಾಗಮ್ಮ ಕಾವ್ಯ ಕರ್ನಾಟಕ-ಆಂಧ್ರಪ್ರದೇಶಗಳಲ್ಲಿ ಕಂಡು ಬರುತ್ತದೆ. ದರೋಜಿ ಈರಮ್ಮ ಇದನ್ನು ತೆಲುಗಿನಿಂದ ಕನ್ನಡಕ್ಕೆ ರೂಪಾಂತರಗೊಳಿಸಿ ಕೊಂಡಿದ್ದಾಳೆ. ಈ ಕಾವ್ಯ ಆಂಧ್ರದಿಂದ ಕನ್ನಡಕ್ಕೆ ಅನುವಾದಂತಹ ಕಾವ್ಯ ಇದಾಗಿದೆ. ಈ ಕಾವ್ಯವನ್ನು ಬುಡಗ, ಜಂಗಾಲ, ಜಂಗಮ, ವೇಷಗಾರರು ಬಾಲ ಸಂತರು ದೊಂಬಿದಾಸರು ಗಂಗಮ್ಮ-ಗೌರಮ್ಮನವರು ಈ ಇತ್ಯಾದಿ ಹೆಸರುಗಳಿಂದ ಕರೆಯಲ್ಪಡುತ್ತಾರೆ. ಸಮುದಾಯದವರು ಪೌರಾಣಿಕ, ಸಾಮಾಜಿಕ ವಿಷಯಗಳನ್ನು ಒಳಗೊಂಡಂತೆ ಪ್ರದರ್ಶನಾತ್ಮಕ ಜನಪದ ಕಲೆಗಳನ್ನೇ ತಮ್ಮ ಜೀವನಾಧಾರವಾದ ಆಸ್ತಿಯಾಗಿಸಿಕೊಂಡು ಆ ಮೂಲಕ ಹಗಲು ವೇಷ ಪ್ರದರ್ಶಿಸಿವುದನ್ನು ಈ ಸಮುದಾಯಗಳು ವೃತ್ತಿಯಾಗಿಸಿಕೊಂಡಿವೆ. ಬುರ್ರಕಥೆ, ಕೈಗೊಂಬೆ, ಕೀಲುಗೊಂಬೆ, ಗಂಗಮ್ಮ, ಗೌರಮ್ಮ ಇತ್ಯಾದಿ ಜನಪದ ಕಲೆಗಳನ್ನು ಇಡೀ ಕುಟುಂಬವೇ ನಿರ್ವಹಿಸುತ್ತದೆ. ತಲೆಮಾರಿನಿಂದ ತಲೆಮಾರಿಗೆ ಸಾಂಸ್ಕೃತಿಕ ಅನನ್ಯತೆಯ ಸೌಹಾರ್ದತೆಯನ್ನು ಸಮಾಜ ಹಾಗೂ ಸಮುದಾಯಗಳಲ್ಲಿ ಭಿತ್ತಿ ಬೆಳೆಯುತ್ತಾ ತಮ್ಮ ಜೀವನವನ್ನೆ ಸಮಾಜ ಹಾಗೂ ಸಾಂಸ್ಕೃತಿಕ ಕಾಯಕಕ್ಕೆ ಮುಡಿಪಾಗಿಟ್ಟಿದ್ದಾರೆ.

ಬಾಲನಾಗಮ್ಮನ ಕಾವ್ಯದಲ್ಲಿ ಸ್ತ್ರೀ ಪ್ರತಿನಿಧೀಕರಣದ ಸ್ವರೂಪವನ್ನು ಅರಿಯಲು ಇಲ್ಲಿ ಪ್ರಯತ್ನಿಸಲಾಗಿದೆ. ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಬಾಲನಾಗಮ್ಮ ಕಥನಕಾವ್ಯವು ಹೇಗೆ ಮಹಿಳಾ ಆಶಯಗಳನ್ನು ಪ್ರತಿನಿಧಿಸುತ್ತದೆ? ಆ ಆಶಯಗಳು ಮಹಿಳಾ ಪರವಾದ ಅಂಶ ಗಳನ್ನು ಪ್ರತಿನಿಧೀಕರಿಸುತ್ತವೆಯೇ? ಅಥವಾ ಪುರುಷ ಪ್ರಧಾನ ಮೌಲ್ಯಗಳನ್ನೇ ಒಪ್ಪಿಕೊಂಡಿವೆಯೇ? ಎಂಬುದನ್ನು ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ. ಮತ್ತೆ ಈ ಕಾವ್ಯದಲ್ಲಿ ಸ್ತ್ರೀಯ ಸಲುವಾಗಿ ಯುದ್ಧಕ್ಕೆ ಹೋಗುವುದನ್ನು ಗಮನಿಸಬಹುದು. ಅಂದರೆ ಈ ಕಾವ್ಯದ ಕೇಂದ್ರವಾಗಿ ಒಬ್ಬ ಸ್ತ್ರೀ ಇದ್ದಾಳೆ. ಮತ್ತೆ ಆಕೆಗೆ ಒದಗುವಂತಹ ಕಷ್ಟಗಳನ್ನು ಗಮನಿಸಬಹುದು. ಆ ಎಲ್ಲಾ

ಕಷ್ಟಗಳನ್ನು ಪರಿಹರಿಸಿಕೊಳ್ಳುತ್ತಾ ಅದಕ್ಕೆ ಸೂಕ್ತವಾದ ಮಾರ್ಗವನ್ನು ಕಂಡುಕೊಳ್ಳುತ್ತಾ ಹೋಗುವಂತಹದ್ದು ಕಾಣಬಹುದು.

ಪ್ರಸ್ತುತ ಮಹಾಕಾವ್ಯದಲ್ಲಿ ಹೆಣ್ಣಿನ ಸಲುವಾಗಿ ಮಾಯದ ಫಕೀರನಂತವನು ಹತ್ಯೆಯಾಗುವುದು. ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಹೆಣ್ಣನ್ನು ತಮ್ಮ ಕಾಮದಾಂಧೆಗೆ ಬಳಸಿಕೊಳ್ಳುವ ದುಷ್ಟರಿಗೆ ತಕ್ಕ ಶಿಕ್ಷೆಯಾಗುವುದನ್ನು ಕಾಣಬಹುದಾಗಿದೆ. ಹಾಗೆಯೇ ಇಲ್ಲಿಯೂ ಪಾತಿವ್ರತ್ಯದ ಪರೀಕ್ಷೆ ಇರುವುದನ್ನು ಕಾಣಬಹುದಾಗಿದೆ. ಭಾರತೀಯ ಪರಂಪರೆಯಲ್ಲಿ ಹೆಣ್ಣು ಸಾರ್ವಜನಿಕವಾಗಿ ತಾನು ಶೀಲಗೆಟ್ಟವಳಲ್ಲ ಎಂದು ನಿರೂಪಿಸಿ ತೋರಿಸುವಂತಹ ಅಮಾನುಷವಾದ ಕೃತ್ಯಗಳು ಹೆಣ್ಣನ್ನು ತುಚ್ಛೀಕರಿಸುವ ಸಂಗತಿಗಳೇ ಆಗಿವೆ. ಹೀಗೆ ಹೆಣ್ಣಿನ ಘನತೆ, ವ್ಯಕ್ತಿತ್ವಕ್ಕೆ ಕುಂದುಂಟು ಮಾಡುವಂತಹ ಪಿತೃ ಪ್ರಧಾನ ವ್ಯವಸ್ಥೆಯ ವಿಕೃತಿಗಳು ಬಾಲನಾಗಮ್ಮ ಕಾವ್ಯದಲ್ಲೂ ಸಹ ಅಭಿವ್ಯಕ್ತಿಗೊಂಡಿರುವುದನ್ನು ಕಾಣಬಹುದಾಗಿದೆ. ಹೆಣ್ಣು ತನ್ನ ದೈನಂದಿನ ನೋವು, ಸಂಕಟಗಳನ್ನು ಮರೆಯಲು ಪುರುಷ ವ್ಯವಸ್ಥೆಯು ತನ್ನ ಮೇಲೆ ಹೇರಿದ ಅಮಾನವೀಯ ಕಟ್ಟು ಕಟ್ಟಳೆಗಳ ದುರ್ಬಲ ಬದುಕಿನಿಂದ ಪಾರಾಗಲು ಅವಳು ಕಥನಗೀತೆಗಳನ್ನು ಕಟ್ಟಿ ಹಾಕುತ್ತಾಳೆ. ಇಂತಹ ಕಥನ ಗೀತೆಗಳಲ್ಲಿ ಅತಿಮಾನುಷವಾದ ಸಂಗತಿಗಳ ಮೂಲಕ ದೈವವೇ ತನ್ನ ಸಹಾಯಕ್ಕೆ ಬರುತ್ತದೆಂದು ಬಿಂಬಿಸುವುದು, ಪ್ರಾಣಿ, ಪಕ್ಷಿಗಳ ಸಹಾಯ ಮಾಡುವಂತಹ ಸಂಗತಿಗಳು ಅವಳ ಕಷ್ಟ ಕಾರ್ಪಣ್ಯದ ಬದುಕಿನ ಒತ್ತಡಗಳಿಂದ ಪಾರಾಗಲು ಕಂಡುಕೊಂಡು ಹೆಗಿದ ದಾರಿಗಳಾಗಿವೆ. ಇಂತಹ ಪ್ಯಾಂತಸಿಗಳ ಮೂಲಕ ಪುರುಷ ಕ್ರೌರ್ಯವನ್ನು ಎದುರಿಸುವ ಮನೋ ಸಿದ್ಧತೆಗೆ ಪೂರಕವಾಗಿವೆ.

## ಪರಾಮರ್ಶನ ಗ್ರಂಥಗಳು


೧. ಡಾ.ಚಲುವರಾಜು (ಸಂ), **ಬಾಲನಾಗಮ್ಮ ಕಾವ್ಯ.**

೨. ಡಾ.ಮೈಸೂರು ಉಮೇಶ (ಸಂ), **ಬಾಲನಾಗಮ್ಮ ಜಾನಪದ ಕಾವ್ಯ,** ಅಮೋಘ ಪ್ರಕಾಶನ, ಮೈಸೂರು, ೨೦೧೨.

೩. ಡಾ.ಜೀ.ಶಂ.ಪರಮಶಿವಯ್ಯ, **ದಕ್ಷಿಣ ಕರ್ನಾಟಕದ ಜನಪದ ಕಾವ್ಯ ಪ್ರಕಾರಗಳು,** ಅಮೋಘ ಪ್ರಕಾಶನ, ೧೯೭೯.

೪. ಡಾ.ಜೀ.ಶಂ.ಪರಮಶಿವಯ್ಯ, **ಜಾನಪದ ಖಂಡಕಾವ್ಯಗಳು.**

೫. ಶ್ರೀ ಕೊಡ್ಲಿಕೆರೆ ಸಿ.ಎಂ.ಬಿ., **ಕನ್ನಡ ಕಾವ್ಯದ ಪರಿಪ್ರೇಕ್ಷದಲ್ಲಿ ಕಾವ್ಯ ಮತ್ತು ತಾತ್ವಿಕತೆಗಳ ಸಂಬಂಧ,** ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬. ಕಾವೇರಿ ಪಿ. ಸಾಗರ, **ದೂರದರ್ಶನ ಧಾರವಾಹಿಗಳಲ್ಲಿ ಮಹಿಳಾ ಪ್ರತಿನಿಧೀಕರಣ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೩.

೭. ಕಲಾವತಿ ಬಿ.ಚಿ., **ಜಾಹಿರಾತುಗಳಲ್ಲಿ ಮಹಿಳಾ ಪ್ರತಿನಿಧೀಕರಣ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭.

೮. ಬ.ಸಿದ್ದಲಿಂಗ ಸ್ವಾಮಿ, **ಜನಪದ ಕಥಾಲೋಕ,** ಕಲಾಪ್ರಕಾಶನ ಬೆಂಗಳೂರು, ೨೦೦೮.

